ಮಮತೆಯ ಮುಡಿಪು

## ಗೆಳೆಯ ಮಕ್ಕಾಲಿಗೆ

ಕುಣಿದಾಡಿ ಮುನಿದಾಡಿ ನಲಿದಾಡಿ ಬಿರುಸಾಡಿ
ಮರೆಸಿ ಚಿನ್ನಾಟವಾಡಿ
ಬಗೆಬಗೆಯ ಬಗೆನೋಟದಿಂದ ಹದಗೊಂಡಿರುವ
ಗೆಳೆತನ ಬಯಲೊಳಾಡಿ

ನವರಂಗಭಂಗಿಯಲಿ ಕುಣಿವ ಮುನ್ನೀರಂತೆ
ಹೃದಯ ತೂಗಾಡುತಿರಲು,
ಸಪ್ತಸಾಗರದೊಳಗೆ ಸುಪ್ತವಾಗಿರುವಂಥ
ಮುಗಿಲನ್ನ ನೋಡುತಿರಲು :

ಬಲ್ಲೆ ನೀನೇ ಗೆಳೆಯ ! ಮುಗಿಲಿನಿಂಗಿತವ
ಮುನ್ನೀರ ಸಂಗೀತಗಳನು :
ಅದಕಂತೆ ನಿನಗೆಂದು ಮುಡಿಗೆಟ್ಟೆ ನಾನೊರೆದ
ವಾರಿಧಿಯ ಗೀತಗಳನು.

# ಸಮುದ್ರಗೀತಗಳು

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ವೇ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ



ವಿಶ್ವ ಕನ್ನಡ ಸಮ್ಮೇಳನ
14/3ಎ, ನೃಪತುಂಗ ರಸ್ತೆ
ಬೆಂಗಳೂರು – 560 002

*Samudra Geethagalu*—a collection of poems by Prof. V. K. Gokak (Vinayaka) published by K. Jayacharya, K. A. S., Additional Director, Directorate of Kannada and Culture (Viswa Kannada Sammelana, 14/3A, Nrupathunga Road, Bangalore-560 002. —Pages 120.





Third edition 1983
5000 Copies



ಬೆಲೆ : ರೂ. 1-50

ಮುದ್ರಕರು :

ಲೋಟಸ್ ಪ್ರಿಂಟರ್ಸ್, 4ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು-560 010

ಆರ್. ಗುಂಡೂರಾವ್
ಮುಖ್ಯ ಮಂತ್ರಿ



ವಿಧಾನ ಸೌಧ
ಬೆಂಗಳೂರು

ದಿನಾಂಕ ೩-೧-೯೮೩

## ಸಂಕಲ್ಪ....ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆ ಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿ ನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ ಬೆಲೆಗೆ

ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದುನೂರಾ ಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯ ಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂಡೂರಾವ್

ಮುಖ್ಯ ಮಂತ್ರಿಗಳು

# ಕಾವ್ಯ ಪರಿಚಯ

ಸಮುದ್ರಗೀತಗಳೆಂಬ ಈ ಕಾವ್ಯಸಂಗ್ರಹ ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಕಾಣಿಕೆಯಾಗಿದೆ. ಇದಕ್ಕೂ ಮುಂಚೆ ಕನ್ನಡ ಕಾವ್ಯದಲ್ಲಿ ಸಮುದ್ರ ವೊಂದು ಬರಿಯ ಸಂಕೇತವಾಗಿ ಕಲ್ಪನೆಯಲ್ಲಿ ಕಂಡ ಪ್ರತಿಮೆಯಾಗಿ, ಸಂಸಾರ ವನ್ನೂ ವರ್ಣಿಸುವ ಒಂದು ಸುಲಭವಾದ ಉಪಮೆಯಾಗಿ ಅಲ್ಲಲ್ಲಿ ತಲೆ ದೋರಿತ್ತು. ಆದರೆ ಗಣನಾತೀತವಾದ ಸಮುದ್ರದ ವೈಭವವನ್ನೂ ಕಣ್ಣು ಕುಕ್ಕಿ ಸುವ ಅದರ ವಾಸ್ತವಿಕ ವೈವಿಧ್ಯವನ್ನೂ ಅನುಭವಿಸಿ ಉತ್ಸಾಹಿತನಾಗಿ ಕವಿ ತನ್ನ ಕಾವ್ಯದಲ್ಲಿ ಆವಿಷ್ಕರಿಸಿದ್ದು ಇದೇ ಮೊದಲೆಂದು ತೋರುತ್ತದೆ. ಹಡಗವನ್ನೂ ಕುರಿತು ಬರೆದ ಕವಿತೆಗಳೂ ಕನ್ನಡಕ್ಕೆ ಅಪೂರ್ವವೆಂದು ನನ್ನ ಅನಿಸಿಕೆ.

ಕನ್ನಡ ಕಾವ್ಯದ ಪ್ರಾಂತ್ಯಾತೀತವಾದ ವ್ಯಾಪ್ತಿ ಸಾಮಾನ್ಯವಾಗಿ ಕವಿಯ ವಿಶ್ವವಿಶಾಲವಾದ ದರ್ಶನದಲ್ಲಿಯೂ, ದೇಶ ಕಾಲವನ್ನೂ ಮೀರಿದ ಪ್ರತಿಮಾ ರಾಜ್ಯದಲ್ಲಿಯೂ ನಮಗೆ ಗೋಚರವಾಗುತ್ತದೆ. ಆಧುನಿಕ ಕಾಲದಲ್ಲಿ ಇಂಗ್ಲಿಷ್ ಗೀತಗಳ ಅನುವಾದದಿಂದಲೂ, ಪರಭಾಷೆಯ ಕಾವ್ಯಾಭ್ಯಾಸ, ಅನುಕರಣ, ಸ್ಫೂರ್ತಿಗಳಿಂದಲೂ ನಮ್ಮ ಕಲಾಸೀಮೆ ಒಂದು ದೃಷ್ಟಿಯಿಂದ ವಿಸ್ತಾರ ಗೊಂಡಿತು. ವಿನಾಯಕರು ಇದಕ್ಕೆ ಒಂದು ವಾಸ್ತವಿಕವಾದ ಭೌಗೋಲಿಕ ವಿಸ್ತಾರವನ್ನೂ, ವೈಷಯಿಕವೈವಿಧ್ಯವನ್ನೂ, ಅಂತರ್‌ರಾಷ್ಟ್ರೀಯ ಪರಿಸರ ವನ್ನೂ ಒದಗಿಸಿಕೊಟ್ಟರು. ಬರಿಯ ಭಾವವಾಗಿ ವ್ಯಕ್ತವಾಗುವ ಅಂತರ್ ರಾಷ್ಟ್ರೀಯ ವೃತ್ತಿ ಇಲ್ಲಿ ಸತ್ಯವಾದ ಒಂದು ವಸ್ತುವಾಗಿದೆಯೆಂದು ಹೇಳಬಹುದು.

ವಿಷಯದ ಹೊಸತನ ಇಲ್ಲಿ ತಂತ್ರಕ್ಕೂ ಒಂದು ಹೊಸತನವನ್ನು ಕೊಟ್ಟಿದೆ. ಸಮುದ್ರವನ್ನು ಮೊದಲಸಲ ಕಂಡ ಕವಿಯ ಆವೇಶ ಉತ್ಸಾಹಗಳು ಈ ಸಂಗ್ರಹದ ಪ್ರತಿಯೊಂದು ಕವಿತೆಯಲ್ಲಿ ತುಂಬಿ ತುಳುಕುತ್ತವೆ. ಆದೇ ಕಣ್ಣು ತೆರೆದು ವಿಶ್ವವನ್ನು ನಿರೀಕ್ಷಿಸುವ ಶಿಶುವಿನ ಆಶ್ಚರ್ಯ ಆನಂದಗಳು ಕವಿ ದೃಷ್ಟಿಯ ವಿಶೇಷವೆಂದು ಹೇಳಲಾಗಿದೆ. ನೋಟ ಒಂದು ಬರಿಯ ಚಟವಾದರೆ, ನಮ್ಮ ಪರಿಸರ ಅತಿ ಪರಿಚಿತವಾದ ವಸ್ತುವೆಂದು ಅವಜ್ಞೆಗೀಡಾದರೆ ಕಾವ್ಯ ನಿರ್ಮಿತಿ ಅಸಾಧ್ಯವಾದದ್ದು. ತಾರಾಸಂಚಾರಿ (astronaut) ಮೊದಲು ಸಲ ಚಂದ್ರಲೋಕದ ಮೇಲೆ ಕಾಲಿಟ್ಟ ಹಾಗೆ ನಿಜವಾದ ಕವಿ ತನ್ನ ಸುತ್ತಲಿನ

ಜಗತ್ತನ್ನು ನಿರೀಕ್ಷಿಸುತ್ತಾನೆ. ನಮ್ಮ ದೈನಂದಿನ ಜೀವನವನ್ನು ಸುತ್ತಿಕೊಂಡ ಅತಿಪರಿಚಯದ ಕವಚವನ್ನೊಡೆದು ಅದರ ನಿತ್ಯ ನವೀನವಾದ ಸೌಂದರ್ಯ ವನ್ನೂ ಕವಿ ಕಾಣುತ್ತಾನೆ. "ಕ್ಷಣೇ ಕ್ಷಣೇ ಯನ್ನವತಾಮುಪೈತಿ, ತದೇವ ರೂಪಂ ರಮಣೀಯತಾಯಾಃ" ಎಂದು ಸೌಂದರ್ಯದ ವ್ಯಾಖ್ಯೆಯನ್ನೂ ಮಾಡಲಾಗಿದೆ. ಹೊಸತನ ವಸ್ತುವಿನ ಆವಿಷ್ಕಾರದಲ್ಲಿರುವಂತೆ, ನೋಡುವ ಕಣ್ಣಿನಲ್ಲಿಯೂ ಅದರ ಚೆಲುವು ರೂಪಿತವಾಗುತ್ತದೆ. ಕಾವ್ಯದ ರಮಣೀಯತೆಗೆ ಅವಶ್ಯಕವಾದ "ನವತೆ" ವಿನಾಯಕರಿಗೆ ಸಮುದ್ರಗೀತಗಳಲ್ಲಿ ಅನಾಯಾಸವಾಗಿ ಲಭಿಸಿದೆ. ಆದರೂ ಕವಿ ಅದನ್ನೂ ಪ್ರತಿಜ್ಞಾ ಪೂರ್ವಕವಾಗಿ ಸಾಧಿಸಲು ಹೊರಟಿದ್ದಾನೆ.

"ಜರ್ಜರವಾದುದೆಲ್ಲ ಮುಳುಗಿ ಹೋಗಲಿ—
ಜಲಸಮಾಧಿಯಲ್ಲಿ
ಹೊಸದೆಲ್ಲ ಹುಟ್ಟಿ ಬರಲಿ—
ಹೃದಯದಾಳದಲ್ಲಿ."

ಬಂಧಗಳ ಬಂದಿವಾಸವನ್ನು ಕೊನೆಗೊಳಿಸಿ, ವೃತ್ತಗಳ ಆವರ್ತವನ್ನು ಮುರಿದೂ, ಸಮುದ್ರದ ಸ್ವಾತಂತ್ರ್ಯವನ್ನು ತನ್ನ ಕಾವ್ಯದಲ್ಲಿ ಉಕ್ಕಿಸಿ ತಾನೇ ಸಮುದ್ರನಾಗ ಬೇಕೆನ್ನುತ್ತಾನೆ ಕವಿ. ಸಮುದ್ರವನ್ನು ಮೊದಲ ಸಲ ಕಂಡಾಗ ಕವಿಗೆ ಅದರ ಭದ್ರ ರುದ್ರ ಶಕ್ತಿಗಳ ದರ್ಶನವಾಗುತ್ತದೆ. ಅದರೊಡನೆ ಕವಿ ಏಕಜೀವಿಯಾಗು ತ್ತಾನೆ. ತಾನೇ ಸಮುದ್ರನಾಗಿ, ತನ್ನ ಕವಿತೆ ತೆರೆಗಳ ಸಲಿಲ ಲೀಲೆಯೆಂಬ ಅರಿವಿನಿಂದ :

"ತೆರೆಯಾಗಿ ಒತ್ತರಿಸುವೆನು
ನೊರೆಯಾಗಿ ತತ್ತರಿಸುವೆನು
ನೀರಾಗಿ ಬಿತ್ತರಿಸುವೆನು"

ಎಂದು ಕವಿ ಘೋಷಿಸುತ್ತಾನೆ. ಇವುಗಳನ್ನೆಲ್ಲ ವಿಚಾರಿಸಿ ನೋಡಿದಾಗ ಶೆಲ್ಲಿಯ "Ode to the West Wind" ಕವಿತೆ ನೆನಪಿಗೆ ಬರುತ್ತದೆ. ಶೆಲ್ಲಿಯ ಪಶ್ಚಿಮ ಮಾರುತದ ಪ್ರಭಂಜನವೂ ವಿನಾಯಕರ ಸಮುದ್ರದಂತೆ ಭದ್ರರುದ್ರವಾಗಿದೆ; ಮರಣ ಹರಣಗಳ ಸಂಯುಕ್ತ ಸಂಕೇತವಾಗಿದೆ. (Destroyer and Preserver) :

"ಮಿಂಚುತಿದೆ ನೋಡು ನೊರೆ
ತೆರೆಗಳ ಮರಣವಾಗಿ
ಮಿಂಚಿ ಮಾಯವಾಗುತಿದೆ ಮತ್ತೆ
ತೆರೆಗಳ ಹರಣವಾಗಿ."

ಶೆಲ್ಲಿಯ ''Be Thou me'' ಎಂಬ ಉತ್ಕಟವಾದ ಪ್ರಾರ್ಥನೆಗೆ ಸಮಾನವಾಗಿ ವಿನಾಯಕರು ಸಮುದ್ರದೊಡನೆ ಹೊಂದಿದ ತಮ್ಮ ಆತ್ಮದ ಏಕರೂಪತೆಯನ್ನು ಇಲ್ಲಿ ವರ್ಣಿಸುತ್ತಾರೆ. ಆದರೆ ಶೆಲ್ಲಿಯ ಕ್ರಾಂತಿ ವಿಚಾರಕ್ಕೆ ಸೀಮಿತವಾಗಿದೆ; ವಿನಾಯಕರ ಘೋಷಣೆ ವೃತ್ತ, ಛಂದ, ಶೈಲಿಗಳನ್ನೊಳಗೊಂಡಿದೆ. ವಿಷಯದ ನವೀನತೆಗೆ ಅನುರೂಪವಾಗಿ ಕಾವ್ಯದಲ್ಲಿ ತಾಂತ್ರಿಕ ಹೊಸತನದ ಅವಶ್ಯಕತೆ ನಿರ್ಮಾಣವಾಗುತ್ತದೆಯೆಂಬುದು ಸರ್ವಮಾನ್ಯವಾದ ಗ್ರಹಿಕೆ. ಇಲ್ಲಿ ಸಮುದ್ರ ಯಾನದಿಂದ ಉಂಟಾದ ಪರಿಸ್ಥಿತಿಯ ಒತ್ತಡ ಈ ಅವಶ್ಯಕತೆಗೆ ಕ್ರಾಂತಿಯ ತೀವ್ರತೆಯನ್ನೂ ಕೊಟ್ಟಿದೆ. ಪರದೇಶಪ್ರಯಾಣಕ್ಕೂ ಮೊದಲು ವಿನಾಯಕರು ಬರೆದ ಕವಿತೆಗಳನ್ನು ಈ ದೃಷ್ಟಿಯಿಂದ ಅಭ್ಯಸಿಸಬೇಕು. ಅವರ "ಕಲೋಪಾಸಕ" ಮತ್ತು "ಪಯಣ"ಗಳು ಸ್ವಪ್ನರಮ್ಯವಾದ ಒಂದು ಅವಾಸ್ತವ ವಾತಾವರಣವನ್ನು ನಿರ್ಮಾಣ ಮಾಡುತ್ತವೆ. ವಿನಾಯಕರ ಕವಿಜೀವನ ಪುಸ್ತಕ ವಾಚನದಿಂದಲೂ, ಸುದೀರ್ಘ ಚಿಂತನದಿಂದಲೂ ಪುಷ್ಟಿಗೊಂಡ ಕಾರಣ, ವಾಸ್ತವತೆಯ ಪ್ರಖರ ಸಂವೇದನೆಗಿಂತಲೂ, ಆದರ್ಶದ ಭಾವೋಪಾಸನೆಯೇ ಈ ಕವನಗಳ ಜೀವಾಳವಾಗಿದೆಯೆಂದೆನಿಸದೆ ಇರಲಾರದು. ಈ ಕೃತಿಗಳ ಹಿನ್ನೆಲೆಯಾಗಿ ಭಾರತದ ಆಧ್ಯಾತ್ಮ ಸಂಸ್ಕೃತಿಯ ಸಂಪತ್ತಿ, ಆಂಗ್ಲ ಸಾಹಿತ್ಯದ ಆಳವಾದ ಅಭ್ಯಾಸದಿಂದ ಬೆಳೆದು ಬಂದ ಪಾಂಡಿತ್ಯ, 'ಗೆಳೆಯರ ಗುಂಪಿ'ನಿಂದ ಪುಷ್ಟವಾದ ಆದರ್ಶಗಳು ಜೀವಂತ ಪ್ರೇರಣೆಯಾಗಿ ನಿಂತುಕೊಂಡಿವೆ. ಈ ಕವನಗಳನ್ನು ವ್ಯಾಪಿಸಿರುವ ವಾತಾವರಣ ಬೆಳುದಿಂಗಳ ಹಾಗೆ ಸೌಮ್ಯವೂ ಸಂದಿಗ್ಧವೂ ಆಗಿದೆ. ಈ ಕವನಗಳ ನಾದಲಯಗಳು ರಮ್ಯ ಮಧುರವಾಗಿವೆ.

ಈ ಕವನಗಳನ್ನು ಬರೆದ ಭಾವಮುಗ್ಧ ಕವಿ ಹಡಗವನ್ನೇರಿದ ಕೂಡಲೆ ತತ್ತರಿಸುತ್ತಾನೆ. ಒಂದು ವಿಶಿಷ್ಟ ಸಂಸ್ಕೃತಿಯನ್ನು ಉಣಿಸಿ ಬೆಳೆಸಿದ ನೆಲದ ನಂಟು ಒಮ್ಮೆಲೆ ಕಡಿದು ಹೋಗುತ್ತದೆ. ಪಶ್ಚಿಮದ ಯಂತ್ರ ಸಂಸ್ಕೃತಿಯ

ಬಾಳುವೆಯೊಡನೆ ಯಾವ ಸಂಬಂಧವೂ ಸಂಪರ್ಕವೂ ಇಲ್ಲದ ಹಾಗೆ ಉಳಿಯುವ ಪ್ರತೀಕದಂತಿರುವ ಹಡಗದಲ್ಲಿ ದೀರ್ಘಕಾಲದವರೆಗೆ ಬಂಧಿತನಂತೆ ಬೇರೆತರದ ಅಪೂರ್ವ ಪ್ರಸಂಗ ನಿರ್ಮಾಣವಾಗುತ್ತದೆ. ಸುತ್ತಲೂ ದಿಗಂತದವರೆಗೆ ಹರಡಿದ ಸಮುದ್ರ ; ನಿಯಮರಹಿತವಾದ ಅದರ ಕಾಡುಸಂಗೀತದ ನಿತ್ಯಆಘಾತ, ಇದರ ಮಧ್ಯದಲ್ಲಿ ಜಲದ್ವೀಪದಂತಿರುವ ಹಡಗ ; ಅದರ ಯಂತ್ರ ಬಿಡುವಿಲ್ಲದೆ ಮಾಡುತ್ತಿರುವ ಅಶ್ರಾವ್ಯವಾದ ಸಪ್ಪಳ ಸಮುದ್ರಸಂಗೀತದ ಹಿನ್ನೆಲೆಯಲ್ಲಿ ಈ ಯಂತ್ರದ ಕರ್ಕಶ ಧ್ವನಿ ಇನ್ನಷ್ಟು ತೀಕ್ಷ್ಣವಾಗುತ್ತದೆ. ಇದರ ಪರಿಣಾಮವಾಗಿ ಕವಿಯ ಜೀವನದಲ್ಲಿ ಮೈಗೂಡಿ ನಿಂತಿರುವ ರಮ್ಯ ಮಧುರ ಛಂದಗಳು ತಾನಾಗಿಯೇ ಮುಗ್ಗರಿಸಿ ಬೀಳುತ್ತವೆ. ಹಡಗದ ತಾಳವಿಲ್ಲದ ಹುಚ್ಚು ಸಂಗೀತಕ್ಕೆ ಅನುರೂಪವಾದ ಕಾವ್ಯವನ್ನೂ ನಿರ್ಮಿಸುವ ಆವಶ್ಯಕತೆ ನಿರ್ಮಾಣವಾಗುತ್ತದೆ. ನವ್ಯಕಾವ್ಯಕ್ಕೆ ಸ್ವೀಕೃತವಾದ ನಾದಲಯಗಳು ಕವಿಯ ಕಿವಿಯನ್ನು ತುಂಬಿ ಮೊಳಗ ತೊಡಗುತ್ತವೆ. ಕಣ್ಣೆದುರಿಗೆ ಇದಕ್ಕೆ ತಕ್ಕ ಬಾಳಿನ ಚಿತ್ರಗಳು ಸುಳಿಯುತ್ತವೆ : ಹಡಗದ ಯಂತ್ರಗಳ ವಿಕಾರವಾದ ಅಂಗಾಂಗಗಳು ; ನೃತ್ಯ ಶಾಲೆಯ ಸ್ವಚ್ಛಂದ ಜೀವನ, ಹಡಗಕ್ಕೆ ಕಲ್ಲಿದ್ದಲಿಯನ್ನೂ ಉಣಿಸುವ, ಬಿಳಿಯರ ದಾಸ್ಯದಲ್ಲಿ ಬೆನ್ನು ಮುರಿಯುವಂತೆ ದುಡಿಯುವ ಕಿರಿಯರ ಕೀಳು ಬಾಳುವೆ ; ಯಂತ್ರಯುಗದ ಪರಿಣಾಮವಾಗಿ ಬೆಳೆದ ಅನ್ಯಾಯ, ಅನೀತಿಗಳೆಲ್ಲ ಒತ್ತಟ್ಟಿಗೆ ಬಂದು ಸೇರಿದ ಹಾಗೆ ಕಾಣುವ ಹಡಗದ ನಿತ್ಯಜೀವನ ಹೀಗೆ ಕಣ್ಣು ಕಿವಿಗಳನ್ನೂ ಕೆರಳಿಸುವ ಬೇತಾಳದಂತಿರುವ ಈ ಹಡಗದ ಅಂತರಂಗ ನವ್ಯಕಾವ್ಯದ ಪ್ರಯೋಗಶಾಲೆಯಾಗಿ ಪರಿಣಮಿಸುತ್ತದೆ. ಗಾಂಧೀಜಿಯವರು ಆಫ್ರಿಕೆಯಲ್ಲಿ ಅಹಿಂಸೆ—ಅಸಹಕಾರಗಳ ಪ್ರಯೋಗಮಾಡಿ ಆಮೇಲೆ ಭಾರತದಲ್ಲಿ ಅದರ ಚಳವಳಿಯನ್ನೂ ಹೂಡಿದಂತೆ, ವಿನಾಯಕರು ಹಡಗದ ವಿಚಿತ್ರ ಪರಿಸರದಲ್ಲಿ ಮುಂದೆ ಬರುವ ನವ್ಯಕಾವ್ಯದ ಪ್ರಯೋಗಕ್ಕೆ ಅವಶ್ಯವಾದ ಸಾಧನಸಾಮಗ್ರಿಯನ್ನು ಕಂಡುಕೊಂಡರು ನವ್ಯಕಾವ್ಯದ ತಂತ್ರ—ಮಂತ್ರಗಳ ಪೂರ್ವಸಿದ್ಧತೆಯನ್ನು ಮಾಡಿಕೊಂಡರು. ಅಂತೆಯೇ "ಸಮುದ್ರಗೀತಗಳು" ನವ್ಯ ಕಾವ್ಯದ ನಾಂದಿಯೆಂದು ನಾನು ತಿಳಿದಿದ್ದೇನೆ. ಹಿಂದೆ ಬರೆದ ಕವಿತೆಗಳ ರಚನಾಪದ್ಧತಿ ಇಲ್ಲಿ ಕಾಣಬರುವುದಿಲ್ಲ. 'ಪಯಣ'ದ ಅಚ್ಚುಕಟ್ಟು

ಇಲ್ಲಿ ಮಾಯವಾಗಿದೆ. 'ಕಲೋಪಾಸಕ'ದ ವಿಷಯ ವಿಧಾನವನ್ನೂ ಇಲ್ಲಿ ತೊರೆಯಲಾಗಿದೆ. ಹಡಗದ ವಾಸ್ತವಿಕಜೀವನ ಇಲ್ಲಿ ಕಾವ್ಯದ ವಿಶೇಷ ಸಾಮಗ್ರಿಯಾಗಿ ಕವಿಯನ್ನು ಕೆರಳಿಸುತ್ತದೆ. ಕವಿಯ ಆದರ್ಶ ಪ್ರಿಯತೆಮಾತ್ರ ಇದರ ಆಘಾತದಿಂದ ಕಡಿಮೆಯಾಗುವುದಿಲ್ಲ, ಆದರೆ ಅದೊಂದು ಇಲ್ಲಿಯ ಜೀವನವನ್ನಳೆಯುವ ಮಾನದಂಡವಾಗಿ ನಿಲ್ಲುತ್ತದೆ. ಇದರ ಪ್ರತಿಕ್ರಿಯೆಯಾಗಿ ಕವಿಯ ಮನಸ್ಸಿನಲ್ಲಿ ಬೆಳಗಿದ ನವ್ಯಪ್ರೇರಣೆಯ ದೀಪ ಅವರ ತರುಣ ಮಿತ್ರರಾದ ಪೇಜಾವರ ಸದಾಶಿವರಾಯರಲ್ಲಿಯೂ ಹೊಸ ಹುಮ್ಮಸವನ್ನು ಹೊತ್ತಿಸಿತು. ಹೀಗೆ ಕವಿ ವಿನಾಯಕರು ನವ್ಯಕಾವ್ಯದ ಅನಿಶ್ಚಿತ ಮಾರ್ಗದಲ್ಲಿ ಇಟ್ಟ ಮೊದಲಡಿ ಹೊಸ ಕಾವ್ಯವನ್ನಷ್ಟೇ ಅಲ್ಲ, ಹೊಸ ಕವಿಯನ್ನೂ ನಿರ್ಮಾಣ ಮಾಡಿತೆಂಬುದು ನೆನಪಿಡಬೇಕಾದ ವಿಷಯ. ಅಂತೆಯೇ ನಾನು 'ಸಮುದ್ರಗೀತೆಗಳನ್ನು ನವ್ಯಕಾವ್ಯದ ನಾಂದಿಯೆಂದು ಕರೆಯಬೇಕೆನ್ನುತ್ತೇನೆ. ಈ ದೃಷ್ಟಿಯಿಂದ ಇಲ್ಲಿ ಪ್ರಕಟವಾದ ಕವಿತೆಗಳನ್ನು ನಾವು ಅಭ್ಯಸಿಸಬೇಕಾಗಿದೆ. ಯಾಕೆಂದರೆ ಇಲ್ಲಿ ಪ್ರಯೋಗದ ನವೀನತೆ ಅಭ್ಯಾಸಿಗೆ ಒಂದು ಆಹ್ವಾನವಾಗಿದೆಯೆಂದು ನಾನು ತಿಳಿದಿದ್ದೇನೆ.

ಸಮುದ್ರವನ್ನು ಕುರಿತು ಬರೆದ ಕವಿತೆಗಳಲ್ಲಿ ಸ್ವಚ್ಛಂದ ನವೀನವಾಗಿದೆ. ಆದರೆ ಇವುಗಳ ಪ್ರತಿಮೆಗಳು ಬಹುತರವಾಗಿ ಹಳೆಯವಾಗಿವೆಯೆಂದೇ ಹೇಳಬೇಕಾಗುತ್ತದೆ. ಈ ಕವಿತೆಗಳನ್ನು ಕಟ್ಟಿದ ರೀತಿ ಮಾತ್ರ ನವ್ಯಕಾವ್ಯಕ್ಕೆ ಮಾರ್ಗದರ್ಶಿಯಾಗಬಹುದೆಂದು ನನಗನಿಸುತ್ತದೆ. ಇಲ್ಲಿಯ ಬಹುಶಃ ಎಲ್ಲ ಕವಿತೆಗಳಲ್ಲಿ ವಿರೋಧಾಭಾಸವೇ ರಚನೆಯ ಮೂಲ ಸೂತ್ರವಾಗಿದೆ: (paradox). ಸಮುದ್ರರಾಜ ಸನಾತನನೂ ಹೌದು; ಸಂಕ್ರಾಂತಿ ಪುರುಷನೂ ಹೌದು; ಅವನು ಚಿರ ಸನಾತನ, ಪುನರ್ನವ. ಅವನು ಮಾನವನಂತೆ ಸಮಾಧಾನ ರಹಿತನಾಗಿದ್ದರೆ, ದೇವನಂತೆ ಶಾಂತಿಪೂರಿತನಾಗಿದ್ದಾನೆ. ಅವನಲ್ಲಿ ಹೊಸತು, ಹಳೆಯದು ಸೇರಿಕೊಂಡಿದೆ; ಅವನು ಮರಣಘರಣಗಳ ಪ್ರತೀಕ. ಹೀಗೆ ಪರಸ್ಪರ ವಿರುದ್ಧವಾದ ವಿಚಾರಗಳನ್ನೂ ಕವಿತೆಗಳಲ್ಲಿ ಸಮತೋಲ (balance) ವನ್ನು ಸಾಧಿಸುವಂತೆ ಹೆಣೆದಿರುವ ಕಾರಣ ಇವುಗಳಿಗೆ ಶಿಲ್ಪದ ಅಚ್ಚುಕಟ್ಟುತನ ಪ್ರಾಪ್ತವಾಗಿದೆ. ಮೇಲುನೋಟಕ್ಕೆ ಈ ಕಾವ್ಯಕ್ಕೆ ಸ್ವಚ್ಛಂದ ಛಂದವಿದೆ; ನೀರಿನ

ಅನಿಯಂತ್ರಿತ ಪ್ರವಾಹಿತ್ವವಿದೆ. ಆದರೆ ಒಳಗಡೆಗೆ ಶಿಲ್ಪದ ಕಠೋರ ಬಂಧವಿದೆ; ರಚನೆಯ ನಿಯಂತ್ರವಿದೆ. ಹೀಗೆ ಸ್ವಾತಂತ್ರ್ಯ ಸಂಯಮಗಳ ಸಂಮಿಲನವನ್ನು ಈ ಕವಿತೆ ಸಾಧಿಸಿವೆ :

"ಚಂದ್ರನಂತೆ ನಿನ್ನ ಹೃದಯವನ್ನು ಉಕ್ಕೇರಿಸಿದವನಲ್ಲ
ಓ ಸಮುದ್ರ
ಆದರೆ ನಿನ್ನ ಮಹಿಮೆಯ ನೋಡಿ ಉಕ್ಕೇರಿದವನು
ತಂದೆ !"

ಹೀಗೆ ಪುಟ ಪುಟಗಳಲ್ಲಿ ಈ ವಿರೋಧಾಭಾಸದ ರಚನಾಕ್ರಮವನ್ನು ನಾವು ಗುರುತಿಸಬಹುದು. ಸ್ವಚ್ಛಂದ ಛಂದದಲ್ಲಿರುವ ಕಾವ್ಯದ ಪ್ರವಾಹಿತ್ವ ಭಾವನೆಯ ಆವೇಶವನ್ನು ವ್ಯಕ್ತಗೊಳಿಸುತ್ತದೆ. ಶಿಲ್ಪದ ಈ ಬಂಧ ಬುದ್ಧಿಯ ನಿಯಂತ್ರಣವನ್ನೂ ಸೂಚಿಸುತ್ತದೆ. ಭಾವ ಬುದ್ಧಿಗಳ ಈ ಸಾಮರಸ್ಯದಿಂದ ಈ ಕಾವ್ಯಕ್ಕೆ ನವ್ಯಕಾವ್ಯದ ಅಧಿಷ್ಠಾನ ಪ್ರಾಪ್ತವಾಗಿದೆ. ಇಲ್ಲಿ ರೊಮ್ಯಾಂಟಿಕ್ ಸಂಪ್ರದಾಯದ ಸ್ಫೂರ್ತಿ, ಉತ್ಸಾಹ, ಆವೇಶಗಳಿವೆ. ಕ್ಲ್ಯಾಸಿಕಲ್ ಸಂಪ್ರದಾಯದ ಸಂಯಮವಿದೆ. ಎರಡರ ಈ ಸಂಯೋಗವೇ ಈ ಕಾವ್ಯದ ವಿಶೇಷವೆಂದು ಹೇಳಬಹುದು. ಹಡಗವನ್ನೂ ಕುರಿತು ಬರೆದ ಕವಿತೆಗಳಂತೂ ನವ್ಯಕಾವ್ಯದ ಯೋಗ್ಯ ಉದಾಹರಣೆಗಳಾಗಿವೆಯೆಂಬುದನ್ನು ನಾವು ಅಭ್ಯಾಸದಿಂದ ತಿಳಿದುಕೊಳ್ಳಬಹುದು. ಇಲ್ಲಿಯ ಛಂದ Jazz ಸಂಗೀತದ ಏರಿಳಿತವನ್ನೂ ಅದರ ವಿಶಿಷ್ಟ ಲಯವನ್ನೂ (syncopation) ಚೆನ್ನಾಗಿ ಸಾಧಿಸಿದೆ. ನವ್ಯಕವಿ ಇದನ್ನು ತಿಳಿಯಬೇಕಾದ ವಿಷಯವೆಂದು ನಾನು ತಿಳಿದಿದ್ದೇನೆ.

೧೯೩೭–೩೮ರಲ್ಲಿ ಬರೆದ ಈ ಕವಿತೆಗಳ ಆಳವಾದ ಅಭ್ಯಾಸವನ್ನು ಮಾಡಿದರೆ ಇಲ್ಲಿ ನವ್ಯಕಾವ್ಯದ ಹೆಜ್ಜೆಯ ಗುರುತುಗಳು ಸ್ಪಷ್ಟವಾಗಿವೆಯೆಂಬುದನ್ನೂ ನಾವು ತಿಳಿದುಕೊಳ್ಳುವುದು ಸಾಧ್ಯ. ಪರಿಚಯಾತ್ಮಕವಾದ ಈ ಚಿಕ್ಕಲೇಖ ಈ ಕಾವ್ಯಸಂಗ್ರಹದ ಅಭ್ಯಾಸಕ್ಕೆ ಪ್ರೇರಣೆಯನ್ನೀಯಲೆಂದು ಆಶಿಸಿ ನಾನು ವಿರಮಿಸುತ್ತೇನೆ.

—ಹೇಮಂತ ಕುಲಕರ್ಣಿ

# ಕವನಗಳ ಕ್ರಮ

ಆತ್ಮ ವೃತ್ತಿ

# ಪ್ರತಿಜ್ಞೆ

ಸ್ವಚ್ಛಂದ ಛಂದದಲ್ಲಿ
ಜಲಕ್ರೀಡಾವೃತ್ತದಲ್ಲಿ
ಅನುದಿನವು ತೆರೆಗಳು ಹಿಡಿವ ತಾಳಲಯದಲ್ಲಿ
ಗೀತವನೊರೆದೆನೆಂದು ಗೀಳ್ ಮಾಡಬೇಡ !
ಸಮುದ್ರವ ಸೆರೆಹಿಡಿದವರುಂಟೆ ?
ಬಾವಿಯ ತೋಡಿ ಮುನ್ನೀರ ಬತ್ತಿಸಬಹುದೆ ?
ಅಬ್ಜಶಬ್ದಗಳ ಪ್ರಾರಬ್ಧದಲ್ಲಿ ಸಹ
ಮಹಾಬ್ಧಿಯ ಕಣವೊಂದು ಸೆರೆಸಿಕ್ಕದಯ್ಯ !
ಕೊಡತಿರು ಶರಧಿಗೆ ಷಟ್ಪದಿಯ ದೀಕ್ಷೆಯನು !

ನೀರು ನೀರಾಗಿ ಬೆಳಗು.
ನಾದಮಯವಾಗು ಹೊರಗು ಒಳಗು.
ಹಿಗ್ಗುಹಿಗ್ಗಾಗಿ ಹರಿ, ತಗ್ಗುತಗ್ಗಾಗಿ ಸರಿ.
ತೆರೆತೆರೆಯಾಗಿ ತೆರೆದರೆ
ನೊರೆನೊರೆಯಾಗಿ ಹರಿದೀತು.
ಉಕ್ಕಲಿ–ಚಿಮ್ಮಲಿ ಸಮುದ್ರದ ಸ್ವಾತಂತ್ರ್ಯ !
ಮಿಕ್ಕಲಿ–ಮೀರಲಿ ಮುನ್ನೀರ ನಿರ್ಮಯಲು.
ಜರ್ಜರವಾದುದೆಲ್ಲ ಮುಳುಗಿಹೋಗಲಿ,—ಜಲಸಮಾಧಿಯಲ್ಲಿ.
ಹೊಸದೆಲ್ಲ ಹುಟ್ಟಿ ಬರಲಿ—ಹೃದಯದಾಳದಲ್ಲಿ !

ಬೇಡಯ್ಯ ! ಬಂಧಗಳ ಬಂದಿವಾಸ ;
ಬರೆದದ್ದೇ ಬಂಧುರವಾಗಬಹುದು.
ಸಾಕಯ್ಯ : ವೃತ್ತಗಳಾವರ್ತ :

ನಿನ್ನ ಮಣಿತವಿರಲಿ ಸಮುದ್ರದ ಕುಣಿತದಂತೆ !
ತರಂಗೋತ್ತರಂಗಗಳನೊಳಕೊಂಡ
ನವರಂಗ ವಾರಿಧಿಯಂತೆ
ವೃತ್ತಬಂಧಗಳು ಸಂಧಿಸಿ ಬಂದ
ಸಮುದ್ರವಾಗು ಕವಿಯೆ !
ಕವಿಗಳ ಸಮುದ್ರಗುಪ್ತನಾಗು !

## ಕಂಡೆ

ಕಂಡೆ ! ನಿನ್ನನು ಮೊದಲಿಗೊಮ್ಮೆ ಕಂಡೆ !
ಓ ಸನಾತನ ಸಮುದ್ರರಾಜ !
ಸಂಕ್ರಾಂತಿ ಪುರುಷ ! ಓ !
ಹಳೆಯದನೆಲ್ಲ ಒಳಗೊಳಗೆ ಕಾಯ್ದು
ಹೊಸದನೆಲ್ಲ ಹೊರಗೆ ಸೂರೆಗೆಯ್ದು
ಚಿರಸನಾತನವಾಗಿ
ಪುನರ್ನವವಾಗಿ
ಸಲಿಲ ಲೀಲೆಯಲ್ಲಿರುವ ಚೈತನ್ಯವೆ !
ಸುಮನೋಹರ ಮೂರ್ತಿ !
ಕಂಡೆ !
ನಿನ್ನನ್ನು ಮೊದಲಿಗೊಮ್ಮೆ ಕಂಡೆ !

## ಗುರುತು

ನೀನು ಶಾಂತನೆನ್ನಲೆ, ಸಮುದ್ರರಾಜ
ತೆರೆತೆರೆಯಾಗಿ ಹಾಯ್ದು ಮೇಘನಾದವ ಗೆಯ್ವೆ
ನೀನು ಕ್ಷುಬ್ಧನೆನ್ನಲೆ, ಸಮುದ್ರರಾಜ !
ದೂರ ಮುಗಿಲು-ಗೆರೆಯನಪ್ಪಿ ನಿದ್ರಿಸುತಿರುವೆ !
ಶಾಂತಿಯಿಲ್ಲ, ಕ್ಷೋಭೆಯಿಲ್ಲ ನಿನಗೆ !
ಶಾಂತಿಯಿದೆ, ಕ್ಷೋಭೆಯಿದೆ ನಿನಗೆ !
ಮಾನವನಂತೆ, ಸಮಾಧಾನರಹಿತ,
ದೇವನಂತೆ ಶಾಂತಿಪೂರಿತ,—
ಭದ್ರ-ರುದ್ರನಿರುವೆ ನೀನು ಓ ಸಮುದ್ರರಾಜ

## ಸಲಿಲ ಲೀಲೆ

ಗೋಪುರಗಳ ಕಟ್ಟಿ ಗೋಪುರಗಳನಳಿಸುತಿರುವೆ
ಓ ! ರುದ್ರಪುರುಷ !
ಮೆಯ್ಯುಬ್ಬಿ ಬಂದ ಮೆರಗನ್ನು ಬಾರುಗಾಗಿ ಮಾಡುತಿರುವೆ.
ಓ ! ಮಾರುತಿ ಬಲಭೀಮ !
ಎನಿತು ಪುರಗಳ ಸಂಹರಿಸಿರುವೆ
ಓ ! ತ್ರಿಪುರಾಂತಕ !
ಎನಿತು ಖಂಡಗಳ ಕಂಡರಿಸಿರುವೆ
ಓ ! ಮಾರ್ತಾಂಡ ಭೈರವ !
ಈ ನಿನ್ನ ತಾಂಡವ ನೃತ್ಯ,
ಈ ನಿನ್ನ ಪ್ರಚಂಡ ಕೋಲಾಹಲ,
ಈ ನಿನ್ನ ನಿಲುವು,
ಈ ನಿನ್ನ ಗೆಲುವು,—
ಇದಕೆ ಎಣೆಯಹಾವುದು ಕಾಣೆ ! ಓ ! ನಟಸಾಮ್ರಾಟ !
ನೀರ ನೀಲಗಂಬಳಿ ಹಾಸಿ
ಹಚ್ಚ ಪಚ್ಚನ್ನ ಹೊದಿಕೆಯ ಹೊಚ್ಚಿ
ಸೀರ್ಪನಿಗಳ ಸೆಂಡಾಡಿ
ತೆರೆಯ ತೊಟ್ಟಿಲಲ್ಲಿ ತೂಗಾಡುತಿರುವೆ !
ಮೆರೆಯ ಬಂದ ಮಾನವನು.
ಹಸುಗೂಸಾಗಿ ಮರೆಯುವನು.
ಮುಗಿಯದ ತರಂಗಮಾಲೆಯ ಕಂಡು
ಅಂತರಂಗವದುಕ್ಕಿ ಬರಲು
ಕೈಮುಗಿಯುವನು.
ನಿನ್ನ ವೈಭವಗಳೆನಿತು ಬಣ್ಣಿಸಲಿ,—
ಸಕಲ ಸಾರ್ವಭೌಮ !

# ಮಿಂಚಿದ ಮಾತು

ತೆರೆಗಳ ಕದನವೇಕಯ್ಯ,—ತೆರೆಗಳ ದೊರೆಯೆ !
ಹೂಂಕರಿಸುವ ನೀಲಾಶ್ವಗಳಂತೆ,
ಅರುಣನ ಕುದುರೆಗಳಂತೆ,
ಕಾಲದಂತೆ,—
ತಾಕಲಾಡುತಿಹವು ತೆರೆಗಳು.
ಪೀಕಲಾಡುತಿಹವು ನೊರೆಗಳು.
ತೆರೆಗಳಲ್ಲಿ ಯಾವುದನ್ನೇರಿದೆ, ಹಯವದನ ?
ಏರಿ ಎಲ್ಲಿಗೆ ನಡೆದೆ !

ತೆರೆಗಳ ತುಮುಲ ಯುದ್ಧವ ನೋಡಿ
ನೀರು ನಕ್ಕ ನಗೆಯೇ ನೊರೆಯಾಯಿತ್ತು.
ಅಹಾ! ಕಾಳರಕ್ಕಸನ ಕೋರೆ-ಹಲ್ಲುಗಳಂತೆ
ಮಿಂಚುತಿದೆ ನೋಡು ನೊರೆ,—
ತೆರೆಗಳ ಮರಣವಾಗಿ.
ಮಿಂಚಿ ಮಾಯವಾಗುತಿದೆ,—
ತೆರೆಗಳ ಹರಣವಾಗಿ !

ಇದೇ ನಿತ್ಯ ಜೀವನ,
ಇದೇ ಚಿರಂತನ ತತ್ವ,
ಇದೇ ಸನಾತನ ಧರ್ಮ !
ತೆರೆಯಾಗಿ ಒತ್ತರಿಸುವೆನು,
ನೊರೆಯಾಗಿ ತತ್ತರಿಸುವೆನು,—
ನೀರಾಗಿ ಬಿತ್ತರಿಸುವೆನು !
ನಿನ್ನ ಕೃಪೆಯೊಂದಿರಲಿ ಸಮುದ್ರನಾಥ !

## ಏಕಮೇವ

ಕಿನ್ನರ ಕಿಂಪುರುಷರ ನೌಕೆಗಳಂತೆ
ತೇಲುತಿಹುದು ಬುರುಗಿನ ಬೆಳ್ಳಿ ಶರಧಿಯ ಮೇಲೆ,—
ನೂರೊಂದು ಕಡೆಗೆ ತೇಲುತಿಹುದು ನೋಡಾ !
ಬೆಣ್ಣೆ ಕಡೆದ ಮಜ್ಜಿಗೆಯಂತೆ
ಹುಟ್ಟು ಕಡೆದ ನೀರು ಅಟ್ಟಿಸುತಿಹುದು ನೋಡಾ !
ತಪತಪನೆ ಕಾಯ್ದು ಕೋಟಿ ಸೂರ್ಯರಂತೆ
ಕಣ್ಣು ಕುಕ್ಕಿಸುವುದು ನೋಡಾ ಸಾಗರವು !
ಹೆಡೆಯಲ್ಲಿ ಪುಷ್ಪರಾಗವಿಹ ಕಾಳ ಸರ್ಪಗಳಂತೆ
ಸಾಗಿಹುದು ನೋಡಾ ಸಾವಿರ ತೆರೆಗಳ ವೈಭವವು !

ಹಚ್ಚಹಸಿರಿತ್ತು ಹಿಂದೀ ಮಹಾಸಾಗರದ ಬಣ್ಣ,
ಕಪ್ಪುಹಸಿರಿತ್ತು ಮತ್ತೆ !
ಅರಬ್ಬಿಯ ಮುನ್ನೀರಿಗೆ ಕರಿನೀಲಿ ಬಣ್ಣವುಂಟು :
ಮುಂದೆ ಬಂದಿಹುದು ಕೆಂಪು ಸಮುದ್ರವೊಂದು.
ನಿನ್ನ ಬಣ್ಣವಾವುದು. ಸಮುದ್ರರಾಜ ?
ಸಪ್ತವರ್ಣದ ಇಂದ್ರಧನುಸ್ಸನ್ನು ಹಿಡಿದು
ಆಕಾಶರಾಜನ ಸರಿಗಟ್ಟಿದೆ ನೀನು.
ಚಣಕೊಮ್ಮೆ ಬಣ್ಣವ ಬದಲಿಸಿ ಚೆಲುವಿಕೆಯುನಾಂತು
ಭೂದೇವಿಯನು ಪಾತಾಳಕೆ ಮೆಟ್ಟಿದೆ ನೀನು !

ಮುಗಿಲಿಗಿಂತ ಮಿಗಿಲು ಸಾಗರದ ನೀಲಿ !
ಸಾಗರದ ತುದಿ ತಟ್ಟಿ ಮುಗಿಲೆಲ್ಲ ನೀಲಿಯಾಗಿಹುದು.
ಮುಗಿಲನಂತತೆಯೆಲ್ಲ ಮುನ್ನೀರ ಗರ್ಭಪಿಂಡ !

ಮೋಡಗಳೆಂಬ ಓಡಗಳು ಬಾಂದಳದಿ ತೇಲುವಲ್ಲಿ
ಹಕ್ಕಿಯೆಂಬ ಚಿಕ್ಕೆ ಮಿನುಗಿದವು ಕಡಲಿನೊಡಲ ಮೇಲ್ಗಡೆಗೆ !
ಗಾಳಿಯಲಿ ರೆಕ್ಕೆ ಬೀಸುತಿದೆ ಪಕ್ಷಿಗಣವು,—
ಈಸುತಿದೆ ಗಾಳಿ, ನೀರಿನಲಿ ರೆಕ್ಕೆ ಬಡಿದು !

ನೆಲ ಗಾಳಿ, ಉರಿ, ಮುಗಿಲು,—
ಪೆಡಂಭೂತಗಳಿವು ನಾಲ್ಕು.
ಈ ಮಹಾಭೂತಗಳ ನುಂಗಿ ನೀರ್ಕುಡಿಯುತ್ತ
ಮತ್ತಮದಗಜದಂತೆ ಕ್ರೀಡಿಸುತ ನಿಂತ ಪಂಚಾನನ !
ನಿನ್ನೆದುರು ನರನೆಂಬ ಪಿಳ್ಳೆ, ಬರಿ ನೀರ್ಗುಳ್ಳೆ ;
ಕೆರಳದಿರು ! ಕರುಣಿಸು ! ಶರಣು ! ಶರಣು !!

## ಪರಿಧಾನ

ಇಲ್ಲಿ ನೋಡಿಲ್ಲಿ !
ಮುಗಿಲು ಮುನ್ನೀರ ಚುಂಬಿಸಿತಿಲ್ಲಿ ;
ಮುನ್ನೀರು ಮುಗಿಲ ರಂಬಿಸಿತಿಲ್ಲಿ.
ನಂಬಿಸಿತಿಲ್ಲಿ ಬೆಳಗು,—
ಕೂಟದ ಗೆರೆ ಬೆಳ್ಳಿಯು ಕಟ್ಟೆಂದು.
ಬಿಂಬಸಿತಿಲ್ಲಿ ಸಂಜೆ—
ಪರಿಧಾನವಿದು ನೀಲಿಮ ರೇಖೆಯೆಂದು !

ಚೌಕೆಂದರೆ ಚೌಕು,
ದುಂಡೆಂದರೆ ದುಂಡಗೆ !
ಇಹುದೆಂದರೆ ಇಹುದು,
ಇಲ್ಲವೆಂದರೆ ಇಲ್ಲ !
ಇದೆಂತಹ ಮಾಟ, ಸಮುದ್ರನಾಥ ?
ಇದೇನು ನಿನ್ನ ಕಲೆಯೋ, ನೀರ ನೆಲೆಯೊ,
ಮುಗಿಲ ಗೆರೆಯೊ, ಕಣ್ಣಿ ಕಟ್ಟೊ,—
ಬಲ್ಲವನೇ ಬಲ್ಲನದನು !
ದಿನಮಣಿಯು ಬಲ್ಲ, ಸಮುದ್ರನಾಥ !
ನಗೆಮೊಗದ ಚಂದಿರನೂ ಬಲ್ಲನದನು !

# ಸೂರ್ಯೋದಯ

ಮುಗಿಲ ಗೆರೆಯನ್ನು ಹಿಡಿದು
ವಾರಿಧಿಯ ಹೊಂಬಸಿರನೊಡೆದು
ಏರುವವು ಮುಗಿಲನ್ನು ಅರುಣನ ಕುದುರೆಗಳೇಳು :
ಮಾಡುವವು ಹಗಲನು !
ಮೋಡಗಳ ಕೊತ್ತಳದ ಕೋಟೆಯೊಂದನು ಕಟ್ಟಿ
ಕಿರಣಗಳ ಬತ್ತಳಿಕೆಯನು ಬದಿಗಿರಿಸಿ
ಬರುತಿಹನು ದಿವ್ಯ ಶರೀರಿ ದಿನಮಣಿ,—
ಕತ್ತಲೆಯ ಕಿತ್ತೊಗೆವ ಕಿರೀಟಿ !
ಬರುತಿಹನು ತೆರೆಯ ಮೇಲ್ ತಲೆಯೆತ್ತಿ !

# ಮಧ್ಯರಾತ್ರಿ

ಮಧ್ಯರಾತ್ರಿಯಲ್ಲಿ,
ಭೂಮಧ್ಯ ಸಮುದ್ರದ ಮಧ್ಯದಲ್ಲಿ
ತೇಲುತಿಹ ಹಡಗದಲ್ಲಿ ನಿದ್ರಿಸುತ
ಸವಿಗನಸು ಕಂಡು ಕಣ್ದೆರದು ನೋಡೆ,—
ಅಹಾ ! ಎನಿತು ನಿಚ್ಚಳವಿಹುದು !
ನೆರೆದಿಹುದು ಮುಗಿಲಲ್ಲಿ ತಾರೆಗಳ ನಿಬ್ಬಣವು,

ಕೋಟಿ ನಕ್ಷತ್ರಗಳು ಕಣ್ಣು ಬಿಡುತಿವೆ ನಭದಿ :
ಬಿಳಿಮುಸುಕನೋಸರಿಸಿ ನೋಡುತಿಹಳಿದೋ ! ಇದೋ!
ಆಕಾಶಗಂಗೆ !
ಆವಳ ಕೇಶಕಲಾಪದಲ್ಲಿ ಕಣ್ಣವೆಯಿಕ್ಕಿ
ತೆರೆಯುತಿದೆ ನೋಡು ಕೃತ್ತಿಕೆಯ ಮೊಗ್ಗೆಮಾಲೆ !
ಕಾದಲನಿಗಾಗಿ ದಾರಿಕಾಯುವಳು,—
ದಾರಿಕಾಯುವಳು ಆಕಾಶಗಂಗೆ !

ಓ ! ಸಮುದ್ರರಾಜ ! ಬರಿ ಹಸುಳ ನಾನು !
ನಿನ್ನ ಪ್ರಣಯಮುಹೂರ್ತವನು ಕಂಡೆನೆಂದು
ಕೋಪಿಸಬೇಡ ಕಂಡೆಯಾ !
ಪರಮ ಪಾವಿತ್ರ್ಯವನು ಪಡೆದಿದೆ ನನ್ನ ಕಣ್ಣಿನಲ್ಲಿ,—
ನಿರ್ಮ್ಮೀರ್ವರ ನಗ್ನ ಸೌಂದರ್ಯವಿದು !

# ಅಹಾ ! ನೀರೆ !

೧

ಎಲ್ಲಿ ನೋಡಿದಲ್ಲೆಲ್ಲ ನೀರೇ ನೀರು !
ತಾನೇ ತಾನಾಗಿ ಮೆರೆಯುವ ಮೊರೆಯುವ ನೀರು !
ನನೆಕೊನೆಯಿಲ್ಲದ, ಚಿರಂಜೀವಿಯಾದ ನೀರು !
ಮುಗಿಲನಣಕಿಸುವ ದಟ್ಟನೀಲಿಯಾದ ನೀರು !
ಅಹಾ ! ನೀರೆ ! ನಿನ್ನ ಸೌಭಾಗ್ಯವೇ ಸೌಭಾಗ್ಯ !
ನಿನ್ನ ಚಿರಜೀವಿ ಪಟ್ಟವೇ ಪಟ್ಟ !

ತಬ್ಬುತಿರುವೆ ಬ್ರಹ್ಮಾಂಡವನೆಲ್ಲ ಸುತ್ತಿ !
ನಿನ್ನ ತೋಳ್ ತಕ್ಕೆಗೆ ಸಿಕ್ಕಿ ಪುಡಿಪುಡಿಯಾದವು ಖಂಡಖಂಡಗಳು!
ಇಂದ್ರನು ಬಂದಿಲ್ಲಿ ಮಳೆಗರೆಯಲಾರ :
ಮಳೆಯು ಮೂಲಮಂತ್ರವನು ಕಲಿಯುವನಿಲ್ಲಿ ಬಂದು !
ವಾಯುವು ಬಂದಿಲ್ಲಿ ಬೀಸಲಾರ,—
ಈಸಬಹುದು ಬೇಕಾದರೆ ಮನಬಂದತ್ತ !
ಅಹಾ ! ನೀರೆ ! ಅಂತಪಾರವಿಲ್ಲದ ನೀರೆ !
ದೇವರು ನಿನ್ನಳಿಯ ! ದೇವತೆಗಳು ನಿನ್ನಣುಗರು !
ಸರಿಯಿಲ್ಲ ನಿನ್ನ ವೈಭವಕೆ ! ಸಾಟಿಯಿಲ್ಲ ನಿನ್ನ ಮೈಸಿರಿಗೆ !
ಅಹಾ ! ನೀರೆ ! ದಿಕ್ಕಿಲ್ಲದ ಮಿಕ್ಕಿಲ್ಲದ ನೀರೆ !
ಯಾರಲ್ಲಿ ನಿಂತಿತು ನಿನ್ನ ನೀರು ?
ಯಾರೆದೆಯನ್ನು ಹರಿಸಲಿಲ್ಲ ನೀರು ನೀರಾಗಿ ?
ಸಾವಿಲ್ಲ ನೋವಿಲ್ಲ ನಿನಗೆ,—
ಮರಣದಂಥ ಹರಣಗಳು ಚರಿಸುತಿಹವು
ನಿನ್ನ ತಿಮಿಂಗಿಲತಿಮಿರೋದಕದಲ್ಲಿ ;

ಪ್ರಳಯ ಕಾಲದಿ ಎದ್ದೇಳುವವು !
ಲಾಲನೆ-ಪಾಲನೆಯಿಲ್ಲ ನಿನಗೆ,—
ನಿನ್ನ ಕ್ಷಾರೋದಕದಲ್ಲಿ ಪವಡಿಸಿದ ಕ್ಷೀರಸಾಗರಶಾಯಿ,—
ಸೃಷ್ಟಿಪಾಲಕ ತಾನು !
ಹುಟ್ಟಿಲ್ಲ ಮುಟ್ಟಿಲ್ಲ ನಿನಗೆ,—
ಮತ್ಸ್ಯಕೂರ್ಮಗಳಾಗಿ ನಿನ್ನ ತೊಡೆಯಲಾಡಿದ ದೇವ,—
ಸೃಷ್ಟಿಕರ್ತನು ತಾನು !
ತ್ರಿಪುಟರಹಿತನಾಗಿರುವೆ, ಓ ! ಸಮುದ್ರರಾಜ !
ಓ ! ಸ್ವಯಂಭೂ !

# ಅಹಾ ! ನೀರೆ !

೨

ಅಹಾ ! ನೀರೆ !
ದೇವದಾನವರು ಮೇರುಪರ್ವತವನಿಟ್ಟು
ಮಂಥಿಸಿದಾಗ,
ಆದಿಶೇಷನ ಹಚ್ಚಿ ಕಡೆದಾಗ,
ವಿಷಜ್ವಾಲೆಯ ನುಂಗಿ ಅಣಿಗೊಂಡಾಗ,—
ಕಲ್ಪತರುವನಿತ್ತೆ ! ಕಾಮಧೇನುವನಿತ್ತೆ !
ಚಂದ್ರನನ್ನು ಕರುಣಿಸಿದೆ ! ಲಕ್ಷ್ಮಿಯನ್ನು ಧಾರೆಯೆರೆದೆ !
ಅಮೃತವನ್ನು ಬೀರಿದೆ ! ಎಣೆಯಾರು ನಿನಗೆ !
ಔದಾರ್ಯದ ಸಾಗರ ನೀನು !

ಆದರೆ ಓ ! ನೀರೆ !
ಸಾಮ್ರಾಜ್ಯದ ಸಾಯುಜ್ಯಕೆ ಹವಣಿಸಿ
ಬವಣೆಬಟ್ಟು ಹಂಟ್ಟುಕಡೆಯುವ ಮಾನವ-ದಾನವನ
ನುಂಗದಿರು ವಿಷಜ್ವಾಲೆಗಳಿಂದ !
ನಿಜ ಮುಕ್ತಿಯ ರಾಣಿವಾಸವನು ತೋರವಗೆ !
ಹಸಿರು ತೆರೆಗಳ ಕೆಳಗೆ ಸೆರೆಯಾಗಿ ಸಿಕ್ಕು
ಬಾಳಲುಸಿರಿಲ್ಲದೆ ಹೇಳ ಹೆಸರಿಲ್ಲದೆ
ಬಳಲುತಿಹ ದೀನ ಮಾನವಗೆ ಕರುಣಿಸು,—
ಅಮೃತಶಕ್ತಿಯನು ! ಜೀವಿತವನು !

# ಮುನ್ನೀರಿನುಪ್ಪು

ಕಹಿ ! ಕಹಿ ! ಕಪ್ಪು ಕಪ್ಪು ! ಉಪ್ಪುಪ್ಪು ನಿನ್ನ ನೀರು
ಓ ! ಸಮುದ್ರ !
ನಿನ್ನ ನೀರು ಉಪ್ಪಾದುದೇಕೆ ?
ಮೂರು ಲೋಕದ ನೀರು ಮುಪ್ಪುರಿಗೊಂಡು ಉಪ್ಪಾ
ಯಿತೇನು ?

ಮಾವಿನಕಾಯಿಯೊಲು ಮಾನವಜಾತಿಯು
ಭೂತಚೇಷ್ಟೆಗಳನು—ಪೂರ್ವೇತಿಹಾಸವನು—
ನಲದಣುಗರು ನೆನೆಯಲೆಂದು ಕಾಲಪುರುಷನು ಕಲಸಿಡಲು
ಬಿಟ್ಟ ರಸವೇನು ನಿನ್ನ ನೀರು, ಓ ! ಸಮುದ್ರ !

ಅಗಸ್ತ್ಯಜನಲ್ಲ ನೀನು ! ತಾನು ನಿರ್ಮಿಸಿದ ಚೆಲುವ
ಮಾನವನು ಹೋಮಿಸುವದು ಕಂಡು ಜಗದೊಡೆಯ
ಸುರಿಸಿದ ಕಣ್ಣೀರು ನಿನ್ನ ನೀರು,—
ಓ ! ಸಮುದ್ರ !

ಇಳೆಯನ್ನೆ ಸುತ್ತಿ ಭೋರ್ಗರೆದು
ಅಟ್ಟಹಾಸದಿ ನಗುವ ದುಃಖ ನೀನು !
ಆಪ್ತಮಿತ್ರರ ಕಳೆದುಕೊಂಡ ಮಾನವರು
ವರ್ಷಾನುವರ್ಷ ಹರಿಸಿದ ಕಣ್ಣೀರ ಕಾಲುವೆ ನೀನು !

ನಿನ್ನ ಉಪ್ಪುಂಡು ಬೆಳೆದರು ಕವಿಗಳು, ಓ ! ಸಮುದ್ರ !
ಅಮರರಾದರು ನಿನ್ನಮೃತವನು ಸವಿದು :
ಉಪ್ಪಿಲ್ಲದೆ ಒಪ್ಪಿಲ್ಲವೆಂಬ ನಿನ್ನೀ ಭಾವ
ಸತ್ಯವದು,—ಚಿರಂತನ ಸತ್ಯವಹುದು !

## ಓಂ ! ನಮೋ !

ನಿನ್ನ ಮಗಳಾದ ಲಕ್ಷ್ಮಿಯಂತೆ ಸೌಂದರ್ಯದ ತವರಲ್ಲ ನಾನು
ಓ ! ಸಮುದ್ರ !
ಆದರೆ ಮಗುವಿನಂತೆ ನಿನ್ನನ್ನು ಪ್ರೀತಿಸಿದೆ ! ಕರುಣಿಸು ತಂದೆ !
ನಾರಾಯಣನಂತೆ ಲಕ್ಷ್ಮೀಲೋಲನಲ್ಲ. ಶೇಷಶಾಯಿಯಲ್ಲ ಓ ! ಸಮುದ್ರ !
ಅವನಂತೆ ಪಾರಾಯಣ ಮಾಡಿದೆ ನಿನ್ನ ! ಉರವಣಿಸೆನ್ನ ಮನವ, ತಂದೆ !
ಚಂದ್ರನಂತೆ ನಿನ್ನ ಹೃದಯವನು ಉಕ್ಕೇರಿಸಿದವನಲ್ಲ, ಓ ! ಸಮುದ್ರ !
ಆದರೆ ನಿನ್ನ ಮಹಿಮೆಯ ನೋಡಿ ಉಕ್ಕೇರಿದವನು, ತಂದೆ !
ನೀಲಕಂಠನಂತೆ,—ನಿನ್ನನುಸರಿಸಿದ ವಿಷವ ನುಂಗಿಲ್ಲ, ಓ ! ಸಮುದ್ರ !
ಆದರೆ ರಾಕ್ಷಸರಂತೆ ಅಮೃತವನೊಂದೆ ಬಯಸಿದವನಲ್ಲ ಕರುಣಿಸು ತಂದೆ !
ದೇವನಂತೆ ಮತ್ಸ್ಯಕೂರ್ಮವಾಗಿ ನಿನ್ನ ತೊಡೆಯ ಮೇಲಾಡಿಲ್ಲ,
ಓ ! ಸಮುದ್ರ !
ಆದರೆ ಕೂರ್ಮ-ಮತ್ಸ್ಯಗಳಲ್ಲಿ ಸಹ ದೇವರನ್ನು ಕಂಡಿರುವೆನು, ತಂದೆ !
ದೇವತೆಗಳಂತೆ ನಿನ್ನಾಳವನು ಮಂಥಿಸಿ ತಿಳಿದಿಲ್ಲ, ಓ ! ಸಮುದ್ರ !
ಆದರೆ ಚಿಂತಿಸಲು ಅದು ಕಣ್ಣೆದುರು ತಾನಾಗಿ ಹೊಳೆದಿಹುದು ತಂದೆ !
ಶೆಲ್ಲಿಯಂತೆ ಮರಣದ ತಲೆಯೆತ್ತಿ ನಿನ್ನನ್ನು ನೋಡಿದವನಲ್ಲ ಓ ! ಸಮುದ್ರ!
ಆದರೆ ನಿನ್ನ ತೆರೆತೆರೆಯಲ್ಲಿ ಹುಟ್ಟುಸಾವಿನ ಗುಟ್ಟನು, ಕಾವ್ಯದ
ಶೆಲೆಯನು ಕಂಡೆನು, ತಂದೆ !
ಹಿಂದಿನ ಕಾವ್ಯದಲ್ಲಿಯಂತೆ ನಿನ್ನ ರೂಪವಿಲ್ಲಿ ಥಳಥಳಿಸಿಲ್ಲ, ಓ ! ಸಮುದ್ರ
ಆದರೆ ನಿನ್ನನ್ನು ನೋಡದೆ ಬಣ್ಣಿಸಿ ನಾನು ಹಳಹಳಿಸಿಲ್ಲ, ತಂದೆ !
ನಿನ್ನ ಸಾವಿರ ಭಂಗಿಗಳನ್ನು ಕೀರ್ತಿಸಲು ಸ್ವರವಿಲ್ಲ, ನನ್ನ ಪುಂಗಿಗೆ.
ನಿನ್ನ ಬಣ್ಣ-ಬಣ್ಣಗಳ ಬಣ್ಣಿಸುವ ಕುಸುರಿಲ್ಲ ನನ್ನ ಕಲೆಗೆ.
ಒಂದೇ ಒಂದು ಮಾತನು ನೂರೊಂದು ಸಲ ಸಾರುವೆನು,—
ನಿನ್ನ ನೋಡಿ ನನ್ನ ಜೀವನಕೆ ಮಂಗಳವಾಯ್ತು, ಮಂಗಳವಾಯ್ತು,
ಮಹಾಮಂಗಳವಾಯ್ತು !
ಓಂ ! ನಮೋ ! ಸಮುದ್ರಪುರುಷಾಯ !

# ವಿಶ್ವಕುಟುಂಬಿ

ದೇವನಲಿ ಬೆಳಕಿನ ಲೋಕಗಳಿವೆಯಂತೆ ;
ಅಲ್ಲಿ ಪರಂಜ್ಯೋತಿ ಬೆಳಗುತಿದೆಯಂತೆ :
ಅವನೆಲ್ಲ ಕಾಣಲಿಲ್ಲ ನಾನು.
ಮುನ್ನೀರಿನಾಳದಲಿ ಹವಳ ಮುತ್ತಿವೆಯಂತೆ,
ಬಣ್ಣಬಣ್ಣದ ಪಡುಶಿಲೆಗಳಿವೆಯಂತೆ :
ಅವನೆಲ್ಲ ಪಡೆಯಲಿಲ್ಲ ನಾನು.
ಕುಂಗನು ಬಲ್ಲನು ಹಸಿರ ಕೆಳಗಣ ಕತ್ತಲೆ ಬೆಳಕನು !
ಅನುಭಾವಿಗಳಿಗೆ ವಿದಿತವಲ್ಲವೆ ಬೆಳಕನ ಬಳ್ಳಿಗಳು ?

ಆದರೆ ಹೃದಯ-ಹೃದಯದಲ್ಲಿದ್ದ ದೇವನನ್ನು ತಿಳಿಯ ಬಯಸಿದಂತೆ
ಸಮುದ್ರದ ಬಣ್ಣಬಣ್ಣದಲ್ಲಿ ತರಂಗ-ತರಂಗದಲ್ಲಿ ಕಂಡೆ
ಹೊಸದೊಂದು ವಿಲಾಸವನು :
ಇಲ್ಲಿಯ ಮೂಡು-ಮುಳುಗುಗಳಲ್ಲಿ ಕಂಡೆ
ಮುನ್ನೀರ ಒಳಗು ಹೊರಗನು.
ಖಂಡಖಂಡಗಳನ್ನು ಹೊಂದಿಸಿ, ತನ್ನೆದೆಯ ಮೇಲೆ
ಜಾತಿಜಾತಿಯ ಮಾನವರನು ತೇಲಿ ಬಿಟ್ಟು
ವಿಶ್ವಕುಟುಂಬಿಯಾದ ಪಾಂಗಿನಲಿ ಕಂಡೆ,—
ಅದರ ದೈವೀಕತೆಯನು !

## ಸಮುದ್ರನಾಥ !

ನನ್ನ ಪ್ರೀತಿಯವರನ್ನು ಹಿಂದಕೆ ಬಿಟ್ಟು
ಸಾಹಸವನೊಂದ ಕೈಕೊಂಡು ನಡೆದೆ :
ಕೊನೆಗಾಣಿಸುವ ಶಕ್ತಿಯ ಕೊಡು,
ಸಮುದ್ರನಾಥ !

ತುಂಬಿದ್ದ ಸ್ನೇಹ ಸಾಗರದಲ್ಲಿ ಬಿಂದುಮಾತ್ರವಾಗಿದ್ದೆ ನಾನು!
ಇಂದಿನ ನನ್ನ ಏಕಾಂತವಾಸವನು
ದಿವ್ಯ ತುಂಬುರನಾದದಿಂದ ತುಂಬುವ ನಂಬುಗೆಯ ಕೊಡು,
ಸಮುದ್ರನಾಥ !

ನನ್ನೀ ಒಬ್ಬೊಂಟಿಗತನವನು
ಎಂಟೆದೆಯ ಬಂಟನಂತೆ ಹೊರುವಾಳ್ತನವ ಕೊಡು !
ನಿನ್ನೇಕಾಂತದಲ್ಲಿ ಮೊಳಗುವದನಂತದ ಗುಟ್ಟು :
ನಿನ್ನ ಕರುಣೆಯಿರಲು,—ಒಂಟಿಗನೆ ನಾನು
ಸಮುದ್ರನಾಥ !

## ಉದಾರ ಸಮುದ್ರ

ತೆರೆಗಳೊಡನೆ ತಿಳ್ಳಿಯಾಡಲು ಬಂದ ಗಾಳಿಗೆ
ಬುರುಗಿನ ಬೆಳ್ಳಿಯನಿತ್ತು ಕಳಿಸಿದ ಸಮುದ್ರರಾಜ :
ಬಿಡಿಸಲು ಬಂದ ಹರಿಗೆ ಕಮಲವನೇರಿಸಲಿಲ್ಲವೆ ಗಜೇಂದ್ರ?

ಮುಗಿಲೊಳಗಿಂದ ಬೆಳಕು ಕರೆವ ದಿನಮಣಿಗೆಂದು
ಬೆಳ್ಳಿಕಟ್ಟನೊಂದನಣಿಗೊಳಿಸಿದನು ಸಾಗರಪತಿಯು,....
ಆಕಾಶದರಮನೆಯ ನೀಲಿಮತೆಗೆ ನೆಲಗಟ್ಟೆನಲು !

ನೌಕೆಯು ಸಾಗಿರೆ ನೇರವಾಗಿ ತನ್ನೆದೆಯ ಮೇಲೆ,
ಕ್ಷೀರದಾಗರವಾಗಿ ಸುಗಮವಾಗಿಸಿದ ಪಥವ,—
ಮಳೆಬಿಲ್ಲುಗಳಿಂದ ಮಜ್ಜನಗೊಳಿಸಿದ ಕಡಲೊಡೆಯ !

ಬೆಳಗ ಬಂದವನನ್ನು ಮುಳುಗಿಸುವುದಿಲ್ಲ.
ಮುಳುಗ ಬಂದವನಿಗೆ ಬೇಡೆನ್ನುವುದಿಲ್ಲ.
ದೇವನಂತೆ ಅನಾಸಕ್ತನಿವ, ಸಮುದ್ರರಾಜ !
ಇವನಲ್ಲದೆ ಚಿರಂಜೀವಿ ಯಾರು ?

# ಕಡಲ ಹುಣ್ಣಿಮೆ

ಎಂತು ಬಿದ್ದೇಳುತಿಹುದು ನೋಡು ಬಿತ್ತರದ ವಾರಿಧಿಯು !
ಎಲ್ಲಿಹರೀ ಮಂಥನವ ಗೆಯ್ವ ದೇವತೆಗಳು ?
ಬರಿಗಣ್ಣಿಗೆ ಕಾಣದೆ ಲಯವಾದರು ಬಯಲಿನಲ್ಲಿ :
ಕಾಣುವದು ಮಂಥನವೊಂದು ; ಅಲ್ಲುದಿಸಿದ ಚಂದ್ರಮನೊಂದು,—
ಕಡಲಾಳವನುಗಿದು ಬಂದ ತುಂಬುವೆರೆ ತಾನು !

ಮುಗಿಲು ಕದ್ದ ರತ್ನೇಂದುವ ಕಂಡು ಮತ್ತಂತರಾಳದಿ ಬಚ್ಚಿಡುವ
ಹುಮ್ಮಸದಿ ಬಿಮ್ಮನೆ ಬಿಗಿಯುತಿದೆ ನೋಡು ಸಾಗರವು,
ಮುಗಿಲಿನಗಲವನೆಲ್ಲ ಮುಚ್ಚಿಬಿಡಲೆಂಬಂತೆ.
ಸೆರೆಸಿಕ್ಕ ನಾಯಕನ ಬಿಡಿಸಿಕೊಳಲೆಳೆಸುವ ಸೈನ್ಯದಂತೆ,
ಶತ್ರುಗಳ ಚದರಿಸಿ ಚಕ್ರವರ್ತಿಯು ಪಡೆವ ಸಾಮ್ರಾಜ್ಯದಂತೆ,
ಬಂಧನದಲಿದ್ದ ಲೋಕನಾಯಕನ ಬಿಡುಗಡೆಗೆದ್ದ ನಾಡವರಂತೆ :
ರೇಗುತಿದೆ, ಕಾಡುತಿದೇ ಗದ್ದರಿಸಿ ಬೇಡುತಿದೆ ನೋಡು, ಸಾಗರವು !

ಅಲ್ಲಿ, ಸಾಗರವಲ್ಲವಿದು : ಶೂನ್ಯದ ತವರುಮನೆ, ನಶ್ವರತೆಯಾಗರವು ;
ವಿಶ್ವವ ರಚಿಸಿದ ಪಂಚಭೂತಗಳ ಮೂಲಭೂತವಿದು.
ರಸವಾಗದ ಕಸ, ಅವಿದ್ಯೆ, ಅಂಧಂತಮಸ್ಸು,
ತನ್ನೆದೆಯುಗಿದು ಮುಗಿಲೆತ್ತಿದ ಚಂದ್ರನನ್ನು ಮುಳುಗಿಸಲೆನೆ
ಮತ್ತೆ ತೆರೆಗಳ ಜಾಲವ ಬೀಸಿದವ್ಯಕ್ತವಿದು.
ಪೆಡಂಭೂತಗಳು ಕುಣಿಯುವವು,—ತೆರೆಗಳ ಹೆಡೆಗಳ ಮೇಲೆ.
ಕೊಳ್ಳಿದೆವ್ವಗಳು ಬಳ್ಳಿಗಟ್ಟುವವು,—ಕರಿನೀರ ಕಂದರದಲ್ಲಿ.
ಪ್ರಳಯಕೌತಣವೀಯುವದು ಬ್ರಹ್ಮರಾಕ್ಷಸರ ಶಂಖನಾದ.
ಅಲ್ಲ, ಸಾಗರವಲ್ಲವಿದು : ಭಯಾನಕದಾಗರ !

ಮುಗಿಲೆಣಿಕೆಯನ್ನಳಿದವರಾರು ?
ಹೃದಯಮಂಡಪದಿ ಮಂಡಿಸಿದ ಚಂದ್ರನನು ರಕ್ಷಿಸಲೆನ್ನೆ,—
ಮುಗಿಲಿಟ್ಟಿಹುದು ನೋಡು, ನಕ್ಷತ್ರಗಳ ಕಾವಲನ್ನು !
ಮುತ್ತುವೆದೆಗಾರಿಕೆಯಿರದೆ ಮೆತ್ತಗಾಗೆರಗಿಹುದು
ಚಂದ್ರನಡಿಗಂಗಲಾಚಿ,—ಮುನ್ನೀರಿದು ಬಡವನಂತೆ.
ಮುಗಿಲೆಣಿಕೆಯನ್ನದವರಾರು ?

ಪರಿಧಾನದಿ ಸುರಿಯುತಿರೆ ತುಂಬುವೆರೆಯ ಕಿರಣರಾಶಿ,
ಬೆಳಕ ಹೊಳೆಯೊಂದು ಹರಿದು ಭೇದಿಸಿದೆ ನೀಲೋದಧಿಯ.
ತುದಿಮೊದಲಿಗೆ ಕತ್ತಲೆ,—ನಡುವಷ್ಟೆ ಬೆಳಕು !
ತಾನೊಸೆದ ಚಂದ್ರಮನು ದೊರೆಯದಿರೆ, ದೊರೆತ ಪಡಿನೆಳಲನ್ನು,—
ಮಣಿಸುತ ಕೋಟಿ ವಿಧಾನಗಳಿಂದ
ಎದೆಗವಚಿ ಕಳೆಯೇರಿ ಸಂತವಿಸಿಕೊಳುವದು ನೋಡಾ ಸಾಗರವು!

## ಜಿಬ್ರಾಲ್ಟರದ ಬಳಿ

ಕಾಣದ ಹುಣ್ಣಿಮೆಚಂದಿರನ ಕಾಣಲೆಳಸಿ
ಮೇರೆವರಿಯುತಿದೆ ಸಾಗರವು.
ಸೂರ್ಯಕಿರಣಕೆ ಸೋತ ಶ್ಯಾಮನೀಲ ಸಲಿಲವೆಲ್ಲ
ತೆರೆತೆರೆಯಾಗಿ ಹೊಳೆವ ಬೆಳ್ಳಿಯಾಗುತಿದೆ, ತಿಳಿಹಸಿರಾಗುತಿಹುದು.
ಅಪರಂಪಾರವಾದ ಆಕಾರವೆ !
ಇಂತೇಕೆ ಅಬ್ಬರಿಸಿ ಎದ್ದು ನಿಂತೆ ?
ನೀನೆತ್ತಿದ ಬೆರಳಿಗೆ ಕಂಪಿಸಿತು ನೀರುಗುದುರೆ.
ಅಸ್ತವ್ಯಸ್ತವಾದ ನಿನ್ನ ರೂಹಿಗೆ
ತೇಲುಗಣ್ಣಾದ ಮಾನವನು.
ಸುತ್ತಣ ಗಿರಿಕಂದರಗಳೆಲ್ಲ ಚೇತನಗೊಂಡೆದ್ದು
ತಾಂಡವಭೈರವನ ತಾಳಕ್ಕೆ ನರ್ತಿಸಲೆಸಗಿದಂತೆ
ಆಕಾಶಪರ್ಯಂತವಾಗಿದ್ದ ನೀನು
ಅವಕಾಶವಿಲ್ಲದೆ ಮೇಲೆ ಕೆಳಗಾಗುತಿರಲು,—
ನಮಗೆಲ್ಲಿಯ ನಿಧಾನ ? ನಮಗೆಲ್ಲಿಯ ಸಮಾಧಾನ ?
ಬೇಡ ! ಬೇಡ! ಹೂಡದಿರು ನಿನ್ನ ರುದ್ರನಾಟ್ಯವನು.

# ತದಿಗೆಯ ಚಂದ್ರಮ (ಮುಳುಗಿನಲ್ಲಿ)

(ಕ್ಯಾಂಡಿಯಾ ನಡುಗಡ್ಡೆಯ ಹತ್ತಿರ)

ಕತ್ತಲೆಯ ಬರವನ್ನು ಸಾರುವಂತಹ ಕೊಂಬು
ಅಂಬುಧಿಯೊಳಾಗಿಹುದು ಬೂದಿಬೆಳಕಿನ ಕಂಬ,—
ಕಂಬ ಮರೆಯಾಗುತ್ತ, ಕೊಂಬು ಕಡೆಗಾಗುತ್ತ ನಿಶೆ ಬಂತು ದಶ ದಿಶೆಯಲಿ ;
ಚಂದ್ರಮಂಗಿಹುದೊಂದು ಕೋಡೆಂದು ಹಾಡಿನಲಿ
ನುಡಿದಿದ್ದರಾಂಗ್ಲ ಕವಿಗಳು. ಕಂಡೆನದನಿಂದು :
ಸಾಂದ್ರರಜನಿಯನಾಳ್ವ ಚದುರಚಂದ್ರನ ತಲೆಗೆ ಮೂಡಿತ್ತದೊಂದು ಕೋಡು!

## ಓಂ ತತ್ಸತ್

ಓ ! ಓ ! ಓ ! ಸಮುದ್ರ !
ಮಹಾಕಾಳ ! ಮಹಾರುದ್ರ !
ನನ್ನ ನಿನ್ನ ಜೀವವಿದದೊಂದೆಯಾಗಿ ನಿಂದವ್ಗೆ
ಆದಿಯಂತ್ಯವಿಲ್ಲಯಿಲ್ಲ ! ಚಿರಂತನವಿದೆಂದವ್ಗೆ !

# ಏಡನ್

ಮುಗಿಲುದ್ದ ನಿಗಿನಿಗಿ ಕೆಂಡದಂಥ ನೆಲದೊಳಗಿಂದ ನೆಗೆಯುತಿವೆ ನೋಡು,—
ಗುಡ್ಡ ದಿನ್ನೆಗಳು, ಪರ್ವತಗಳು, ಪರ್ವತಾವಳಿಗಳು !
ಭೂಮಿತಿಯು ನೆನೆದು ದೇವನಿಟ್ಟ ತ್ರಿಕೋಣಾಕೃತಿಗಳಂತೆ,—
ಉಸುಬಿನರಣ್ಯದಿ ಕಾವಲು ನಿಂತ ಹಿರಣ್ಯಕಶ್ಯಪನಂತೆ !
ಗಿಡವಿಲ್ಲ, ಬಳ್ಳಿಯಿಲ್ಲ, ಹಾಳು ಹಾಳು ! ಬೀಳು ಬೀಳು !
ವೃಕ್ಷವಿಲ್ಲ ! ರುಕ್ಷ ! ರುಕ್ಷ ! ಹೊಗಿ ! ನಿಗಿ ನಿಗಿ !
ಹಸಿರ ಹೆಸರಿಲ್ಲ, ತಣ್ಣುಸಿರು ತಣ್ಣೆಳಲಿಲ್ಲ, ತೋಯ್ದ ಮಳಲಿಲ್ಲ,—
ನೀರಡಿಸಿ ಚಾಚಿದ ನಾಲಗೆಯಿದು ! ಏಡನ್ನು !

ಮುನ್ನೀರ ಹತ್ತಿರ ನಿಂತು ಇಷ್ಟು ನೀರಡಿಸಿತೇ ನೆಲವು ?
ಇಲ್ಲಿ ನೀರೆಲ್ಲಿ ? ಉಪ್ಪಿನರಣ್ಯವಿದು !
ನೀರಡವಿಯ ಬದಿಗೆ ಉಸುಬಿನ ಬಯಲ ಹೊಯಲು !
ಇಲ್ಲಿಯ ಕೆರೆ ಬರಿದು ! ಬಾವಿ ಬರಿದು ! ಕುಂಡ ತೆರವು ! ಹೊಂಡ ತೆರವು !
ಹನಿಹನಿ ನೀರನರಸಿ ಅಂಡಲೆಯುತಿದೆ, ನೋಡು ಜನದನದ ಜಂಗುಳಿಯು !
ಅತ್ತಕಡೆ ಬಿದ್ದರೆ ಕೆಂಡದಂಥುಸುಬು ! ಇತ್ತ ಜಲಸಮಾಧಿ !
ಅರಣ್ಯದ ಹಡಗವೇ ಪಶುವಿಲ್ಲಿ—ಒಂಟಿಯಾದ ಒಂಟೆ !
ಅದೇ ಎತ್ತು ! ಅದೇ ಕರು ! ಅದೇ ಎಮ್ಮೆ ! ಅದೇ ಆಕಳು !
ಇಲ್ಲಿಯ ನರಪ್ರಾಣಿ ಸಹ ಒಂಟೆಯಂತೆ ಗೋಣೆತ್ತಿ ನೋಡುವನು.
ಪರಿಧಾನದಿ ಮೃಗಜಲವ ಕಂಡು ಬೆನ್ನಟ್ಟಿ ಬಿಸುಸುಯ್ಯುವನು.
ಎಂಥ ಭಯಂಕರ ತಾಪ ! ಎಂಥ ಭಯಂಕರ ಶಾಪ !!

ಏಡಿಯಂತೆ ಏಡನ್ನನು ಹಿಡಿದ ಗುಡ್ಡದ ಕೆಳಗೆ
ಗಿಡ್ಡದಾಗಿ ನಿಂತಿದೆ ನೋಡು,—ಬ್ರಿಟನ್ನಿನ ಬಂದರ ! ಕಡ್ಡಿಯ ಹಂದರ !
ಸಾಮ್ರಾಜ್ಯವೈಭವವೇ ! ಮಣ್ಣು ಮುಕ್ಕಿಲ್ಲಿ ಬಂದು.

ಉಸುಬಿನ ಕಣಗಳನ್ನೆಣಿಸು ! ಮರಣದ ಪಾಠವನ್ನು ಕಲಿ !
ಹೋಲಿಸು ನಿನ್ನ ಸಂಪತ್ತನ್ನು ಈ ಹಾಳಿನೈಸಿರಿಯೊಡನೆ.
ಇದರ ಸಂಯಮ ನಿನಗೆ ಸಂಧಿಸೀತೆ ?
ಇದರ ತಾಳ್ಮೆಯ ಗುಟ್ಟು ನಿನಗೆ ತುಸವಾದರೂ ತಿಳಿದೀತೆ ?
ಈ ಗುಡ್ಡದಡಿಗೆ ನಿನ್ನ ಮನೆಗಳು ಗುಬ್ಬಿಮನೆಗಿಂತ ಕಡೆ !
ಸುಡು ಅವುಗಳನು ! ಬೆಂಕಿ ಹಚ್ಚು ! ಅರಣ್ಯದಲಿ ತಿರುಗು ಅರಬನಂತೆ !
ಇಲ್ಲಿ ಬೇಡ ನಿನ್ನ ಸೊಕ್ಕು. ನಿನ್ನ ಸೆಡವಿಗೆ ಎಡೆಯಿಲ್ಲಿಲ್ಲಿ.
ಕಿತ್ತು ನಿನ್ನಂಗಡಿಯ ! ಹದ್ದು ಪಾರಾಗು ಬಿಟ್ಟೀ ಗಡಿಯ !
ನಿನ್ನ ಗರ್ವಭಂಗಕ್ಕೆ ಹೆಚ್ಚೇನು ಬೇಕು ? ಏಡನ್ನಿನ ಗುಡ್ಡವೊಂದು ಸಾಕು !

ಈ ಉಸುಬಿನ ಬಯಲಿಗೆ ಹೊಸಬನಾದ ನನಗೆ ಹೊಳೆಯುವದರ್ಥವೊಂದು
ನೀರಿಲ್ಲದ ಬೆಟ್ಟಗಳ ನಡುವೆ ಬೇರೂರಿ ಬೆಳೆದ ಆಲವ ನೋಡು !
ಸಾವಿರ ವರುಷ ಸೂರ್ಯನಿಗೆ ನೀರಡಿಸಿ ಮಲಗಿತ್ತು ಅರಬ್ಬಿ ದೇಶ !
ಆಗ ತಣಿಸಿದನದರುದರವನು ಪೈಗಂಬರನು ಹುಟ್ಟಿ.
ಅಂದು ಅರಬ್ಬಿಯು ಕುಡಿದ ನೀರಿಗೆ ಸಮುದ್ರಗಳು ಬತ್ತಿದವು,
ಅರಬು ಹೀಗಿಂತು, ಭೂಮಿಗಿಳಿದಿದ್ದ ಚಂದ್ರ !
ಜಗದ ನಂದನವನಗಳೆಲ್ಲ ಅರಬರ ಕೈವಶವಾದವಂದು !

# ಆಫ್ರಿಕ

ಕೆಂಪು ಸಮುದ್ರದ ನೀರು ಕತ್ತಲೆಯಂತೆ ಕರ್‍ರಗಿರಲು
ಆಫ್ರಿಕದ ಕಾಡಿಗೆಯ ಮೇಲೆ ಸಂಜೆಗೆಂಪು ಮೂಡಿತ್ತು.
ಕರಿಬೆಟ್ಟಗಳ ಹೊದರಿನಲ್ಲಿ ಹುದುಗುತ್ತಿದ್ದನು ರವಿಯು.
ಅಬಿಸೀನಿಯದ ಕೊಲೆ, ನಿಗರ್ವಿಗಳ ದಾಸ್ಯ, ಸುಮಾಲಿಗಳ ಕೊರಗು,–
ಕಪ್ಪು ಹಚ್ಚುವ ಕೃತಿಗಳಿವು,—ರಕ್ತವರ್ಣದವು !
ಆಫ್ರಿಕಖಂಡದ ಜನರ ಮೆಯ್ಯಲ್ಲಿಲ್ಲ ಮಾಂಸಖಂಡ,—
ಗುಲಾಮರ ಲೋಕವದು,—ಮಾನವನು ಮೆಟ್ಟಿದ ಪಾತಾಳವದು—
ಅಂಧಂತಮಸ್ಸದು—ಕೊಲೆಗಡಕರಡುಮನೆಯದು—
ಅಲ್ಲಿ ಮುಳುಗುವ ರವಿಯು ಕೂಡ ರಕ್ತದ ಮಡುವಿನಲೀಸುತಿದ್ದ !

ಇಂತಿರಲು ಆಫ್ರಿಕದ ಮುಳುಗು,—ಮೂಡಿತೊಂದಾಸೆಯಲ್ಲಿ.
ಬೆಳ್ಳಿಯ ಕಡ್ಡಿಯನು ಬಿಳಿ ಬೆಳಕಿನಲದ್ದಿ ಬರೆದ ಗೆರೆಯಂತೆ
ಮುಗಿಲ ಪಟದ ಮೇಲೆ ವಿರಾಜಿಸಿದ ಬಿದಿಗೆಯ ಚಂದ್ರಮನು,
ಕಳೆಯೇರಿದನು, ಕರೆತಂದನು ಕೆಲವು ಚಿಕ್ಕೆಗಳನು,
ಹಿಡಿದ ಕೊಂಬಿನಲ್ಲಿ ಬಿಂಬಿಸಿದನು ಬೆಳಕನೆಲ್ಲ
ಆಸೆಯಿದೆಯೆಂದನು, ಕೃಷ್ಣೋದಕದ ಹೃದಯವ ಕೂಡ
ಭೇದಿಸಿದನು ಹೊಳೆವ ಕಿರಣಗಳ ಕೂರಲಗಿನಿಂದ.

ಅರೆನಿಮಿಷ ಬೆಳಗಿರಲಿಲ್ಲ.—ಕಳೆಗುಂದಿದನು ಚಂದ್ರ.
ಕಂದಿತೆಲ್ಲ ಅವನ ಬಣ್ಣ ! ಕೇದಿಗೆಯ ಬಿಳುಪು ಬಂತು :
ಬಾಗಿದನು. ಮೊಗ ತಗ್ಗಿಸಿದನು, ಹುದುಗಿದನು ಬೆಟ್ಟಗಳ ಹೊದರಿನಲ್ಲಿ.
ಹೆದರಬೇಡ ಆಫ್ರಿಕವೆ ! ಬರಬಹುದು ನಿನ್ನ ಹುಣ್ಣಿಮೆ ನಾಳೆ.
ಹುಣ್ಣಿಮೆಯಿದ್ದಲ್ಲಿ ಅಮಾವಾಸ್ಯ,—ಅಮಾವಾಸ್ಯವಿದ್ದಲ್ಲಿ ಹುಣ್ಣಿಮೆ :
ಇಂತಿಹುದು ಕಾಲಚಕ್ರ. ಕದಲಬಹುದು ನಿನ್ನ ಕತ್ತಲೆ !

# ಸುಯೇಜ್ ಕಾಲುವೆ

ಮುಗಿಲ ನೀಲಿಯ, ಮುನ್ನೀರ ಹಸಿರ, ಮರುನೆಲದ ಸುವರ್ಣ ವರ್ಣವನು,–
ಒಂದೆಡೆಗೆ ನೋಡುವಾಸೆಯಿರಲು,—ನಡೆ ಸುಯೇಜಿಗೆ !
ಉಸುಬಿನುದಧಿಯ ದಾಂಟಲು ನಿರ್ಮಿಸಿದ ನೀರ ಸೇತುವೆಗೆ !
ಮುನ್ನೀರ ಕಾಲುವೆಯು ದಾಂಟಿಲ್ಲಿ ನಡೆಯುವಾಗ
ಈ ಹಡಗವಹುದು—ಅರಣ್ಯದ ಹಡಗ !

ಕಚ್ಚಲು ಬರುವ ಹಾವಿನಂತೆ ರೊಚ್ಚಿನಿಂದ ನಾಲಗೆಯೆತ್ತಿ
ದಂಡೆಗುಂಟ ಕುನುಸಿಟ್ಟು ನಡೆಯುತಿದೆ ನೋಡು—
ಹಡಗವು ಬರಲು, ಹೆಚ್ಚಾದ ನೀರು !
ಬಲಬದಿಗೆ ಚಾಚಿಹುದು ಮುಗಿಲುದ್ದಕೆ ಮರುಭೂಮಿ ;
ಹೊಳೆಯುವದು ಕಣಕಣವಾಗಿ ರವಿಕಿರಣಗಳ ಕೆಳಗೆ.
ಎಡಬದಿಗೆ ಎಸೆಯುತಿಹವಲ್ಲಲ್ಲಿ—ಇಜಿಪ್ತದ ಪುರಗಳು, ತರುಗಳು.
ನಡುವೆ ಸಮುದ್ರಗಳೆರಡು ಹೊಂದಿಸಿದ ಮುಂಗೈ ಮೇಲೆ
ಸಾಗಿಹುದು ನೌಕೆಯಿದು ಸಂತತದಿ.

ಹಿಂದೊಮ್ಮೆ ಜಲಧಿಯನು ಬರಿದಾಗಿಸಿದನಂತೆ ಅಗಸ್ತ್ಯ ಕುಡಿದು.
ಸಾಗರಗಳನು ಸಾಗುಗೊಳಿಸಿದನಿಂದು ಡಿ ಲೆಸೆಪ್‌ಸಿಯು,—
ಚಿರಂತನವಾಗಿ ಕೂಡಿಸಿದನವುಗಳ ಕೈ ಕೈ ಹಿಡಿದು,—
ಸಾಂಗಗೊಳಿಸಿದನು ಸಾವಿಲ್ಲದ ವಿವಾಹವನು ಮುಗಿಲ-ಮಂಟಪದ ಕೆಳಗೆ !
ಕರುಣಿಸಿದನು ಕೆಂಪುಸಮುದ್ರಕೆ ಮುಖಮುದ್ರೆಯನು.

ಇರಲೇನು ? ಯುರೋಪು ಚಾಚಿದ ಬಲುಮೆಗೆಯ್ಯಿದು ಸುಯೇಜು.
ಬೆಳಸಲಿಲ್ಲ ಸೌಹಾರ್ದವನು : ಹುಟ್ಟಿಸಿತು ನೂರು ನ್ಯಾಯಗಳ !
ಆಫ್ರಿಕೇಸಿಯಗಳನು ಬಲುಮೆಯಿಂದಗಲಿಸಿದ ಕೈಯ್ಯಿದು ಸುಯೇಜು,—
ಅವುಗಳ ರಕ್ತವನು ಹರಿಸುವ ನಾಳವಿದು. ಅಲ್ಲದೆ
ಹಡಗಗಳಿವು ರಕ್ತದಲಿ ಬಲಿವ ಜಿಗಳಿಗಳು ನೋಡಾ !

# ಕ್ರೀಟ್‌ದೇವಿ

ಮುನ್ನೀರ ಚೆಲುವನು ಮುಂಗಾಣಬಯಸಿದಲ್ಲಿ
ಭೂಮಧ್ಯಸಮುದ್ರವನು ನೋಡು ಕಿರುಹಗಲಿನಲ್ಲಿ,—
ಶರದೃತುವಿನಾರಂಭದಲ್ಲಿ !
ನೂರೊಂದು ಬುರುಗಿನ ಬಳ್ಳಿಯೊಡನೆ ತಿಳ್ಳಿಯಾಡುತಿದೆ ಗಾಳಿ,
ಕಳ್ಳ ಹೆಜ್ಜೆಯನಿಕ್ಕಿ ತೆರೆಗಳನು ತರಿದೊಡ್ಡುತಿದೆ
ಸಿಂಗರಿಸಿ ಮಂಜಿನಂತಹ ಸೀಕರವನೇಳು ಬಣ್ಣಗಳಿಂದ.
ದಿಕ್ಕಿಲ್ಲದೆ ಬಳ್ಳಿವಳ್ಳಿಯಾಗಿ ತೇಲುತಿದೆ ಬೆಳ್ಳಿಯ ಬರುಗು !

ನೋಡುತೀ ಬೆಳ್ಳಿಯ ಕೆನೆಯನು—ಫೇನವನು—
ಹುಟ್ಟುಕಡೆಯಲೊಡೆದು ಬರುವ ವಿಮಲೋದಕವನು —
ನೋಡಿದಲೆಲ್ಲ ಕೆನೆವಾಲಂತೆ ಥಳಥಳಿಸುವ ಸಮುದ್ರವನು,—
ನೆನೆಯುವೆನು ಹಿರಿಯರೊರೆದೊಂದು ಮಾತ :
ಕ್ಷೀರಸಾಗರವಮ ಕನಸಲ್ಲ ! ಕಣ್ಣಿನ ಬದುಕು !
ಸೂರ್ಯನಾರಾಯಣನ ಪದತಲದಿ ಪವಡಿಸಿಹ ಕ್ಷೀರಸಾಗರವ ಕಾಣು !

ಈ ಹಾಲ್ಗಡಲ ಹೃದಯಕಮಲವು ಬಿರಿಯೆ ಹಿಂದೊಮ್ಮೆ
ಮೆಲ್ಲನದರೊಳಗಿಂದ ಜನಿಸಿದೆ ಮಾಲಕುಮಿಯಂತೆ :
ವರಿಸಿದೆ ದೇಪನ, ಹರಸಿದೆ ನಿನ್ನಣುಗರನು : ಓ ಕ್ರೀಟದೇವಿ !
ನಿನ್ನರಿಗಳಳಿದರೆಲೆ ಕ್ರಿಮಿಕೀಟಕಗಳಂತೆ !

ಹಬ್ಬಿತು ನಿನ್ನ ಕೀರ್ತಿ ಸಪ್ತಸಮುದ್ರಗಳ ದಾಟಿ ;
ಉಳಿದ ನೆಲದಣುಗರು ನಿದ್ದೆ ತಿಳಿದೇಳುವ ಮುನ್ನ
ಕಟ್ಟಿದರು ನಿನ್ನ ಕುವರರು ಕೊತ್ತಳದ ಕೋಟೆಗಳನು,—

ಜನರ ಕಟ್ಟುಪಾಡನು, ಸುಖವನು, ಶಾಂತಿಯನು,—
ಆಳಿದರು ನೂರು ಪಟ್ಟಣಗಳನು, ಬಾಳಿದರು ವೈಭವದಿ,—
ಹೋಮರನು ಒಪ್ಪುವಂತೆ !

ಇಂದಿಗೋ ! ಆವರಿಸಿಹುದು ಹಿಮವು ನಿನ್ನ ಪರ್ವತಾವಳಿಗಳನ್ನು :
ಮಣ್ಣುಗೂಡಿಹುದಿಂದು ಗಳಿಸಿ ಘನೈಶ್ವರ್ಯವೆಲ್ಲ :
ನೆಟ್ಟಿಹರು ಬೆಳಕು-ನಿಲ್ಗಂಬವನೊಂದ ನಿನ್ನ ತಲೆಯ ಮೇಲೆ,
ಮರೆಯಾಗದಿರಲೆಂದು ಹಿಂದೆ ನೀನೂರಿದಾ ನೆನಹು.
ಸಾಮ್ರಾಜ್ಯಮದದಿ ನಿನ್ನ ಲೆಕ್ಕಿಸದೆ ಮುಂದೆ ಸಾಗಿರುವವರ
ಸೊಕ್ಕಿಳಿಯಬಹುದೆಂದು ಮಂಜುದುಟಿಯ ಮುಗುಳ್ನಗೆಯಿಂದ ಸೂಚಿಸಿ
ಕರಾಳ ಕಾಲದುಶ್ಶಾಸನನ ತೋಳ್‌ತಕ್ಕಿಗೆ ಸಿಲುಕಿ ಬಣ್ಣಗುಂದಿ
ಬಿಳುಪೇರಿ ನಿಲ್ಲಲಾರದೆ ನಿಂತಿರುವೆ ಮರೆಮಾಚಿ ನಾಚಿ ಓ ! ಕ್ರೀಟದೇವಿ !

## ಸ್ಟ್ರಾಂಬೋಲಿ

ಕಾಲು ಚಾಚಿ ಕುಳಿತಿಹುದಿಟಲಿ ಭೂಮಧ್ಯಸಮುದ್ರದ ನಡುವೆ
ಸಿಸಿಲಿಯೊಡನೆ ಕದನವೆಸಗಿ ಪಾದಧೂಲಿಯನದಕೆರಚುವಂತೆ :
ಇಟಲಿಯ ಹೆಬ್ಬೊಟ್ಟನುಗುರಿನ ಹೊಗರ ನೋಡು ! ಶೋಭಿಸುತಿಹವು
ಪುರಗಳಲ್ಲಿ
ನಿಡಿದಾದ ಪರ್ವತಾವಳಿಯನೇರಲು ಹವಣಿಸುವ ಸಾಹಸಿಗಳಂತೆ
ಮತ್ತೆ ನಿದ್ರಿಸುತಿಹವು ಕೆಲವು ಹೊಳೆದು ಬೆಂಗದಿರನ ಹೊಂಬೆಳಕಿನಲ್ಲಿ.
ಸಿಸಿಲಿಯು ದಂಡೆಗುಂಟ ಹರವಿಹುದು ಮೆಸಿನಾನಗರವು ತನ್ನ ಚೆಲುವನ್ನೆಲ್ಲ.

ದಾಟುತೀ ನೀರಿನೊತ್ತನು ಮುನ್ನಡೆಯೆ ಕಂಡಿತಾಗ ಸಮುದ್ರ
ನೀಲಗನ್ನಡಿಯಂತೆ : ತೆರೆಯಿಲ್ಲ, ಸುಳಿಯಿಲ್ಲ !
ಅಖಂಡವಾಗಿ ನಿದ್ರಿಸುತಿತ್ತು ನಭೋಮಂಡಲದ ಪಡಿನೆಳಲಾಗಿ.
ಬಿಂಬಿಸಿತು ನಿರಾಳವಾದ ಶಾಂತಿಯನು : ಬರುತಿರಲಲ್ಲಿ
ದಾರಿಯಲಿ ನೀನವಿತು ಕುಳಿತಿದ್ದೆ ಸ್ಟ್ರಾಂಬೋಲಿ !

ಮುಚ್ಚಿತ್ತು ಕರ್ಮೋಡ ಕೆಂಡವನುಗುಳ್ವ ನಿನ್ನ ರುದ್ರಮುಖವ.
ಜ್ವಾಲಾಮುಖಿಯೆ ! ನಿನ್ನ ಶಿಖೆಯುಡಗಿತ್ತು ನಿಂತ ಹೊಗೆಮೋಡದಲಿ :
ಜಾರಿತ್ತು ನಿನ್ನ ಮೈಮೇಲೆ ಗಂಧಕದ ರಸ,—ಹೆಪ್ಪುಗಟ್ಟಿ ಹಸಿರಾಗುತ್ತ :
ಆರಿತ್ತು ನಿನ್ನೆದೆಯ ಮೇಲೆ ಕಬ್ಬಿಣದ ಕಸ,—ಕಾಡಿಗೆಯ ಕಪ್ಪಿನಂತೆ.
ನೆಲದ ಬಸಿರನು ಬಗೆದು ನೀ ಕಿತ್ತು ತಂದಿರುವ ಮಣ್ಣಿನ ಬಣ್ಣ
ಹರವಿತ್ತು ತಿಳಿನೀಲಿಯಾಗಿ ನಿನ್ನಂಗಾಂಗಗಳ ಮೇಲೆ ;
ಪಾರಿಜಾತವ ತರಲು ವಾರಿಧಿಯ ದಾಟಿ ಮುನ್ನಡೆದ ಹಸುಳರನು
ಹೆದರಿಸಲೆನಲು ಮುಸುಕು ಹೊತ್ತು ಕುಳಿತಿರುವೆ ಮುದಿರಾಕ್ಷಸನಂತೆ,—
ಸ್ಟ್ರಾಂಬೋಲಿ !

ಹಳ್ಳಿಯನು ಕಟ್ಟಿ ಗಿರಣಿಯೊಂದನು ಹೂಡಿಹನು ನಿನ್ನಡಿಯಲ್ಲಿ ಮಾನವನು
ಅನುದಿನವು ತೀನುಗುಳ್ವ ಲಾಳರಸವ ಲೆಕ್ಕಿಸದೆ,
ನಿನ್ನ ಪ್ರಳಯಾಗ್ನಿಲಿ ಬೆಂದುಬಿಡಬಹುದೆಂಬುದನು ನೆನೆದು ಸಹ !



4

ಕಾಯಿಲೆಯಿರಲು, ಕೆಂಗಿಡಿಗಳನುಗುಳಲು ನೀನು, ನಿನ್ನಾ ವಾಂತಿಭೇದಿಯಿಂದ
ಅಣಿಗೊಳಿಸುವನು ತನಗೆಂದು ಹಲವೌಷಧಿಗಳನು.
ಹುಮ್ಮನಿಹೆ ನೀನು ಮೂಗುಮುರಿದು, ವ್ಯಂಗ್ಯ ನಗೆಯೊಂದ ನಕ್ಕು !
ಹೇಸಿಗೆಯ ತಿನ್ನಲು ಬಂದ ನಾಯಿಯನು
ಬೀಸಿ ಹೊಡೆದರೇನು ಬಿರುದು ಬಂತೆ !

ರೋಮರಾಜ್ಯದ ತಲೆ ತಗ್ಗಿತು, ಸಿಸಿಲಿಯ ಸುಸಿಲು ತಲೆಕೆಳಗಾಯಿತು :
ಬೇರೊಂದು ರಾಜ್ಯವೆದ್ದಿರುವದಿಂದಿಟಲಿಯಲ್ಲಿ.
ಬೇರೆ ನೌಕೆಗಳಾಳುತಿಹವೆಂದು ಸಪ್ತಸಮುದ್ರಗಳನ್ನು !
ನೀ ಮಾತ್ರ ನಿಂತಿರುವೆ—ಧೂಮಧಾಮವಾಗಿ,
ಭೂಮಧ್ಯಸಮುದ್ರದ ದೀಪಸ್ತಂಭವಾಗಿ !
ಹೊಗೆ ಬಿಡುತಿರುವೆ ಎಂದಿನಂತೆ : ರಾಜ್ಯಗಳಳಿದರೇನು,
ಉದ್ಬುದ್ಧವಿರಲೇನು,—ಮತ್ತೆ ನೆಲಸಮವಾದರೇನು,—
ಎಲ್ಲ ಸಮವೆನುತಿರುವೆ ! ಎಂದಿನೊಲು ಸುರಿಸುತ್ತ
ಕಡಲ ಮಡಿಲಲ್ಲಿ ನಿನ್ನ ಕಾರೊಡಲ ಕೆಂಡವನು !

ನಿನ್ನ ತಲೆಮೇಲೆ ನಿಂತಿಹನು ನೋಡು ಪಡುವಣಕೆ ನಡೆದ ಸೂರ್ಯ
ನೀನು ಜ್ವಾಲಾಮುಖಿ,—ಅವನು ಜ್ವಾಲೆಯ ಜಗತ್ತು !
ಅವನ ಸ್ವಯಂಪ್ರಕಾಶಕ್ಕೆ ತಾಕಿಲ್ಲವಿನ್ನೂ ಹೊಗೆ :
ಅಚ್ಚಳಿಯದಿದೆಯಿಂದಿಗೂ ಅವನ ನಗೆ.
ನೀನು ಕಾಲದಷ್ಟು ಹಳಬನಾದರೆ ಅವನು ಪ್ರಾಣಕ್ಕಿಂತ ಪ್ರಾಚೀನನಹುದು.
ಕಳೆಯುವದಿದು ಸ್ಟ್ರಾಂಬೋಲಿ ಹಳ್ಳಿ—ಇಲ್ಲದಿರಲು ನಿನ್ನ ಬೆಂಕಿಯ ಮಳೆ.
ಸೂರ್ಯನು ತಣ್ಣಗಾಗಲು,—ಮುಳುಗುವದು ಮೂಜಗವೆಲ್ಲ !

# ಮೆಸೀನಾ ಉಪಸಾಗರದಲ್ಲಿಯ ರಾತ್ರಿ

ಒಂದು ದಂಡೆಗೆ ಸಿಸಿಲಿಯ ದೀಪಮಾಲೆ,
ಇನ್ನೊಂದು ದಂಡೆಗೆ ಇಟಲಿಯ ದೀಪಾವಳಿ ;
ಒಂದು ದಂಡೆಗೆ ಹರಿತಶಿಲಾಪ್ರಕಾಶಸ್ತಂಭ,
ಇನ್ನೊಂದು ದಂಡೆಗೆ ಮಿಂಚಿನ ಮಂಗಳಾರತಿ ;
ಬೆಳಕು ಬಂದು ಕಡಲ-ಹಕ್ಕಿಗೆ ತೋರಣ ಕಟ್ಟಿತಿಲ್ಲಿ.
ಅನಂತ ರೂಪಗಳ ಧರಿಸಿತಿಲ್ಲಿ !

ದಿನ್ನೆಯಿಂದ ಶರಧಿಗೆ ಹಬ್ಬಿದ ದೀಪಗಳಿವು ಸುರಪುರಗಳೇನು ?
ಬೀಡು ಬಿಟ್ಟ ಉಜ್ವಲ ಸ್ವಪ್ನಗಳೇನು ?
ಕೆಳಗಿಳಿದು ಬಂದ ತಾರೆಗಳ ನಿಬ್ಬಣವೇನು ?
ಬೆಳಕುಹುಟ್ಟಿನಲ್ಲಿ ಚಕಮಕಿಸುವ ರಾಜಭೃಂಗಗಳೇನು ?
ಒಂದು ದಂಡೆಗೆ ಸಿಸಿಲಿ, ಇನ್ನೊಂದು ದಂಡೆಗೆ ಇಟಲಿ,
ಸಿಸಿಲಿಯ ಕವಿಗಳು ನಿರ್ಮಿಸಿದ ಕಣ್ಣು ಕಟ್ಟೇನಿದೆಲ್ಲ ?

ಬೀದಿಗಳಿಹವು ನೋಡು ದೀಪಮಾಲೆಗಳ ರೇಖೆಗಳ ನಡುವೆ.
ಒಂದೊಂದು ದೀಪಕೊಂದೊಂದು ಮನೆ. ಬಿದಿಗೆಯ ಚಂದ್ರಮನಂತೆ
ಪುರವಿದನು ರೇಖಿಸಿದೆ ದಿವ್ಯವಿದ್ಯುಲ್ಲತೆಯು !
ಪಟ್ಟಣದ ಪಡಿನೆಳಲಲ್ಲವಿದು, ಬೆಳಕಿನಲೊಗೆದ ಪ್ರತಿಮೆ !
ಅಲ್ಲಲ್ಲ ! ಬಣ್ಣನೆಗೆ ಮೋಹಗೊಳದಿರು ! ಜೋಕೆ !
ಅನ್ಯಾಯದ ದೀಪೋತ್ಸವವಿದು ! ಮುಸಲೀನಿಯ ಪ್ರಾಣಪ್ರತಿಷ್ಠೆ !

# ಕೋರ್ಸಿಕಾ

ನಿನಗಿಂತ ಕಂಪುಳ್ಳ ದ್ವೀಪಗಳಿರಬಹುದು ಕೋರ್ಸಿಕಾ ! ಸುಗಂಧದೇಹಿ !
ಜಾವಾ, ಸುಮಾತ್ರಾ, ಸಿಂಹಲ,—ಮತ್ತಿನ್ನನೇಕ.
ನಿನ್ನಡವಿಗಿಂತ ನಿಬಿಡವಿಹ ವನಗಳುಂಟು ಲೋಕದಲ್ಲಿ.
ಬೀಸಲಿಲ್ಲ ಮತ್ತೆಲ್ಲಿಯೂ ಮಾಲೋಕಕೆ ನಿನ್ನ
ಕೀರ್ತಿಯನೊಯ್ವಂಥ ಗಂಧವಹನು,
ಅರಳಲಿಲ್ಲವಿನ್ನೆಲ್ಲಿಯೂ ನಿನ್ನ ನರುಗಂಪನಜರಾಮರವಾಗಿಸಿದ ವನಸುಮವು.

ನೀರಮೇಲೆ ತೇಲಿಬಿಟ್ಟ ಸೂರ್ಯಪುತ್ರನಂತೆ—ಕರ್ಣನಂತೆ—
ಕರ್ಣಪೂರವಾದನು ನಿನಗೆ ನೆಪೋಲಿಯನ್ನನಂ ಬೆಳಗಿದನು ಪ್ರಖರವಾಗಿ.
ಚಂದ್ರನಂತೆ ಸಮುದ್ರಕುವರನಾಗಿ ಮೂಡಿಸಿದನೀರೇಳು ಲೋಕದಿ
ನಿನ್ನ ಧವಳಗಿರಿಗಳಂತತಿ ಧವಳವಾದ ವಿಮಲ ಕೀರ್ತಿಯನ್ನು !

ಅತ್ಯಾಸೆಯಲ್ಲವದು,—ಅವತಾರಿಯಾಗಲಿವ ಪಟ್ಟ ಸಾಹಸವು.
ವಿಶ್ವವೇ ತನಗೆ ಕೊಡೆಯಾಗಬೇಕೆಂದ,
ದೇವತ್ವವನ್ನು ತನ್ನಲಿರಿಸಬೇಕೆಂದ,
ಪೌರುಷದ ಶಿಖರವನೇರಿ—ದೈವತವದೇ ಅದೇ ಎಂದು ಕುಣಿಯಬೇಕೆಂದ.
ಬರಿ ಪದವಿಗಾಗಿ–ಸಂಪದಕಾಗಿ–ಶಕ್ತಿಗಾಗಿ ಹಾತೊರೆದವನಲ್ಲ,
ಅರ್ಧ ಸಾಧಿಸಿತು ; ಅರ್ಧ ಸಾಧಿಸಲಿಲ್ಲ ; ಅದು ಅವನ ತಪ್ಪಲ್ಲ.

ಬೇರೆಯಿತ್ತು ದೈವದಾಟ :
ಕಾಲಕ್ಕೆ ಸರಿಯಾಗಿ ಸಿಕ್ಕ ಸಾಮಗ್ರಿಗಳನಣಿಗೊಳಿಸಿ
ತನ್ನ ಕನಸನೊಂದ ಕಟ್ಟಬೇಕೆಂದ : ಇದಕಿಂತ ಹಿರಿಮಾತಾವುದು ?

ಒಂದು ದ್ವೀಪದಲ್ಲಿ ಹುಟ್ಟಿ ಇನ್ನೊಂದು ದ್ವೀಪದಲಿ ಮಡಿದ.
ಇವನ ಜೀವನದ ತುದಿಮೊದಲ ಸಂಜೆಮುಂಜಾವಂತೆ : ಒಂದೇ ಬಣ್ಣದವು.
ಹರೆಯದ ಹಗಲಿನಲ್ಲಿ ಮಾತ್ರ ನವಖಂಡಗಳನ್ನು ಬೆಳಗಿದನು-ಸೂರ್ಯನಂತೆ.
ಸಮುದ್ರದಲ್ಲಿಯೇ ಹುಟ್ಟಿ ಸಮುದ್ರದಲ್ಲಿಯೇ ಗುಪ್ತನಾದನಿವನು,
ಪಶ್ಚಿಮದ ಸಮುದ್ರಗುಪ್ತನು ನೋಡಾ !

# ನೇಪಲ್ಸ್‌ದಲ್ಲಿಯ ಮೂರ್ತಿಸಂಗ್ರಹಾಲಯ

ಇರಬಹುದು ಭೂಲೋಕದಲ್ಲಿ ನಂದನವನವು ;
ಬರಬಹುದು ಮುಗಿಲೆಲ್ಲ ನಾಳೆ ನಮ್ಮೆಡೆಗಿಳಿದು ;
ತರಬಹುದು ಇಂದ್ರನೈರಾವತವ ಮತ್ತೊಂದು ದಿನ ಪಾರ್ಥನಿನ್ನೊರ್ವನು !
ಇನ್ನೆಲ್ಲಿ ಕಂಡಿರದು ಇಂಥ ಭೂವೈಕುಂಠ ;
ಮುನ್ನಡೆದು ಬಂದೆ ಸೀಜರರ ಸಾಲನು ದಾಟಿ
ಘನ್ನಮಹಿಮರ ನೋಡಿ ಸಾಃಕ್ರಟೀಸನಿಗೆರಗಿ, ವಂದಿಸಿ ಯುರೀಪಿಡಿಸನ !

ಆಗ ಬಂತೆದುರಾಗಿ ದೇವತೆಗಳನುರಾಗ ;
ಸಾಗಿದೆನು ಜುಪಿಟರನ ಇಂದ್ರಪದವಿಯ ಕಂಡು
ತೂಗಿದೆನು ಹರುಷದಲಿ ಹರ್ಕ್ಯುಲೀಸನ ಬಲಕೆ, ಮರ್ಕ್ಯುರಿಯ ಬುದ್ಧಿ ಬಲಕೆ !
ನೋಡಿಲ್ಲಿ : ರವಿ—ಅಪಾಃಲೋನ ಶರಸಂಧಾನ !
ಬೇಡಿಲ್ಲಿ : ಓಶಿಯಾನಸನಿಗಿಹ ಕಡಲ ಸಿರಿ !
ಮಾಡಿಲ್ಲಿ ಮುಜುರೆಯನು : ಮತ್ತಿತರ ಸುರರೆಲ್ಲ ನಿಂತಿಹರು ವೈಭವದಲಿ !

ಕಂಡಿತಿಲ್ಲಿಯೆ ಅಫ್ರುದಿತಿಯ ಮಾಲಕುಮಿ ಕಳೆ ;
ಚಂದದಲಿ ಮಲಗಿಹಳು ಒಲಿದ ದೇನಯಿದೇವಿ.
ವಂದಿಸಿದೆ ಭೂಗೋಲವನ್ನೆ ಕೈಯ್ಯಲಿ ಹಿಡಿದು ನಿಂತಿಹ ಯುರ್ಯಾನಿಯಳಿಗೆ.
ಆದಿಶೇಷನ ಭಾರವನೆ ಹೊತ್ತ ಅಟ್ಲಾಸ,
ನೋಡಿ ತನ್ನನು ತನ್ನೊಳೊಸೆದಿರುವ ನಾರ್ಸಿಸಸ !
ಹಾಡುವರು ಕೊಳಲೂದಿ ಯಕ್ಷಕಿನ್ನರರಂತೆ ಮತ್ತೆ ಸ್ಯಾಃಟಿರ-ಫಾಃನರು !

ಅಹುದಹುದು ! ಭೂಮಿಗಿಳಿದರು ಸ್ವರ್ಗದವರಲ್ಲಿ,
ಅಹಹ ! ತಮ್ಮೊಳು ತಾವೆ ಆಳುವರು, ಬಾಳುವರು !
ಇಹರು ಕಾಲನ ಮೀರಿ ನಿಂತ ಚಕ್ರೇಶ್ವರರು ಕಾಲನೊಳನಾಡಿನಲ್ಲಿ !
ಅಹುದಾದರೋಂ ನಮೋ ! ಶಿಲ್ಪಿಗಳ ಜೀವನಕೆ !
ಕಹಿಬಾಳ ವಿಷವನ್ನು ಕುಡಿದರಗಳಿಗೆ ಬಾಳಿ
ಸಹಿಸಿದರು ಮರಣವನು ತಮ್ಮಾತ್ಮದಮರತೆಯನಿತ್ತು ಮಾನವರಿಗೆಂದು !

## ಮಾರ್ಸೈದಲ್ಲಿಯ ನಾ:ತರ್ ದಾಮ್

ನಿನ್ನ ನದಿಗಳ ಹೆಸರು ನನಗೆ ಗೊತ್ತಿಲ್ಲ, ಓ ಫ್ರಾನ್ಸ್ !
ಆದರೆ ಇಂಥ ಚೆಲುವಿನ ಹೊನಲೇ ಹರಿದಿಹುದು ನನ್ನ ನಾಡಿನಲ್ಲಿ.
ನಿನ್ನ ವನ-ವೃಕ್ಷಗಳ ಹೂ-ಬಳ್ಳಿಗಳ ಪ್ರೀತಿಯನು ಗಳಿಸಿಲ್ಲ ಓ ಫ್ರಾನ್ಸ್ !
ಇವನೆಲ್ಲ ನೋಡಿ ನಾನೊಸೆದ ತರುಲತೆಗಳ ನೆನವಾಗುವದು ಮಾತ್ರ.
ಚೆಲುವಿಹುದನಂತ,—ಕಿಡಿಯನು ತಿಳಿದವಗಿಡಿ ಬೆಂಕಿಯ ಮೂಲ ಗೊತ್ತು.

> ಆದರೂ ನಿನ್ನ ಚೆಲುವಿಗೆ ಮನಸೋತು ಮುಗ್ಧನಾದೆ !
> ಅದಕಿದೆ ಸ್ವಾತಂತ್ರ್ಯದ ಕಾಂತಿ, ಸ್ವಾನುಭೂತಿಯ ಸ್ವಚ್ಛಂದ,
> ಆನಂದದ ಲಹರಿಲಹರಿ ! ಮಾಟದ ವಿಡಾಯ !
> ಪ್ರಕೃತಿಯಾಳವನರಿತಿದೆ ನಿನ್ನಲ್ಲಿಯ ಕಲೆ,—
> ಕಲೆಯ ನೆಲೆಯನ್ನರಿತಿದೆ ನಿನ್ನಲ್ಲಿಯ ಪ್ರಕೃತಿ !
> ನಿನ್ನ ಬಸಿರಲ್ಲಿ ಬಂದ ಸುಂದರಿಯರು,
> ನಿನ್ನಡಿಯಲ್ಲಿ ನಿಂತ ಉನ್ನತ ಕ್ರಿಸ್ತಾಲಯಗಳು,
> ನಿನ್ನ ನಂದನವನಗಳಲಿ ಪುಟಿಯುತಿಹ ಕಾರಂಜಿ,—
> ಇದರ ಫೋಟೋಗ್ರಫಿಯಿದೆ ಮೈಸೂರಲ್ಲಿ,—
> ಜೀವಕಳೆಯಿದೆಯಿಲ್ಲಿ.—ನಿನ್ನುಸಿರಿನಲ್ಲಿ !

ಮಾರ್ಸೈದಲ್ಲಿಳಿದು ನಿನ್ನ ವೈಭವವ ನೋಡಿ ಬೆರಗುಬಟ್ಟೆ ;
ನಿನ್ನೋಣಿಗಳಲ್ಲಿ ತಿರುಗಾಡಿದೆ, ಕಾವಣಗಳಲ್ಲಿ ತಲೆದೂಗಿದೆ ;
ನಗೆಮೊಗದ ನನ್ನಿಗರೊಡನೆ ಮಾತಾಡಿದೆ ; ಸಮಾಧಾನವಿರಲಿಲ್ಲ.
ಪರತಂತ್ರ ಭಾರತೀಯನ ಗಂಟಲಿಗೆ ಗಾಳವಿದೆಲ್ಲ ಸಿರಿ.
ನಿನ್ನ 'ನಾ:ತರ್ ದಾಮು'ವು ಮಾತ್ರ ದಿವ್ಯಧಾಮವಾಯ್ತು !

> ನೆಲನೀರುಗಳಂಚಿನ ಮೇಲೆ ನೆಲೆಸಿದ
> ಉನ್ನತೋನ್ನತ ಕ್ರಿಸ್ತಾಲಯಕೆ ಕಳಸವನಿಟ್ಟು
> ಕೈಯಲೆತ್ತಿ ಕ್ರಿಸ್ತನನ್ನು
> ಶಾಂತಗಂಭೀರವಾಗಿ ನಿಂತಿಹಳು ಮಾತಾಯಿ :

ಆ ದೇವಮಾತೆಯ ಪಡಿಯಚ್ಚಿದೆ
ನಿನ್ನ ಹೆಣ್ಣಿನ ಮೋರೆಯ ಮೇಲೆ, ಓ ! ಫ್ರಾನ್ಸ್ !
ನೀನೆಯೇನು ಆ ಮಾತಾಯಿ ?
ರಕ್ಷಿಸಲಣುಗರನ್ನು, ಸುಪ್ಪಿಗೆಯ್ಯಲೆಂದತಿಥಿಗಳನ್ನು,—
ನಿಂತೆಯೇನು ನೀನಲ್ಲಿ ?

ಬಿಟ್ಟವನೊಂದರಳಿಸಿ ದೇವಮಾತೆಗೆ,—ನಿನ್ನ ದೇಹವು ಪಾವನವಾಯ್ತು,
ತಲೆಯೆತ್ತಿ ನೋಡಿದೆನು ಬಣ್ಣ ಬಣ್ಣದ ಗುಮ್ಮಟಗಳನ್ನು ;
ನುಡಿದದ್ದನ್ನೆ ನುಡಿದು ಮುಗಿಲ ಕಿವಿಗೆ ಮುಟ್ಟಿಸುವ ಮಾಡಗಳನ್ನು ;
ಮಳೆಬಿಲ್ಲುಗಾಜಿನಲ್ಲಿ ಮೋಜುಮೋಜಿನ ರೂಹುವೆತ್ತ ಚಿತ್ರಗಳನ್ನು ;
ಶಿಲುಬೆಗೇರಿಸಿದ ಕ್ರಿಸ್ತಮೂರ್ತಿಯ ;—
ತನೂರುಹುಗಳ ತೆರೆದು ನಿಂತ ದೇವದೂತರ,—
ನೋಡಿ ಬಿಲ್ಲುಂಬೆರಗಾದೆನಾಗ.
ಕ್ರಿಸ್ತನನೆತ್ತಿಕೊಂಡು ನಿಂತ ಮೇರಿ ! ಮಾತಾಯಿ !
ನಿನ್ನನೋಡಿದೊಡನುಕ್ಕಿಬಂತು ನನ್ನ ಹೃದಯ.
ಏಕಾಕಿಯಾದ ನಾನು ಪರದೇಶಿಯಂತೆ ಶರಣು ಬರಲು
ತೆಗೆದಪ್ಪಿಕೊಂಡೆ ನನ್ನನ್ನು, ಆಶೀರ್ವದಿಸಿದೆ ; ಕರುಣಿಸಿದೆ ; ವರವನಿತ್ತೆ
ನಿನ್ನ ನೆನೆಸಲು ಎದೆಯುಕ್ಕುವದು—ನಿನ್ನಡಿಗಿದ್ದ ಸಮುದ್ರದಂತೆ !

# ಉಂಟೆ

ಅಂಚೆಯಂತೆ ಕತ್ತರಿಸಿ ತೆರೆಗಳನ್ನು
ಹಂಚುವಿನಂಚಿನಿಂದ
ನಮ್ಮ ನಾವೆಯಿದು ತೆರುಳುತಿದೆ ನೋಡಿರೆ !
ಗರಿಗಳನು ಹರಹಿ ರವಿಕಿರಣದಿ ಹೊಳೆಯುತಿರೆ
ರಾಜಹಂಸವಿದು ಮರಳುತಿದೆ ನೋಡಿರೆ !

ಮುಗಿಲೆತ್ತರ ಧ್ವಜಸ್ತಂಭವನೆತ್ತಿ
ತಾರೆಗಳ ಕೆಳಗೆ,
ಪಡಿಮುಗಿಲಂತೆ ದೀಪಮಾಲೆಯ ಹಚ್ಚಿ,
ಚುಕ್ಕಾಣಿಯ ಹಿಡಿಯೆ
ಪ್ರತಿಮಾರುತಿಯು,—ಪಾರ್ಥನ ರಥದಂತೆ,
ಯೋಗೀಶ್ವರನು ನಡೆಯಿಸಿದ ತೇರಂತೆ
ತೋರುತಿದೆ—ಸಾಗುತಿದೆ ನೋಡಿರೆ !

ಹಡಗವಿದರ ಹಿಂಬದಿಯ ನೋಡಿದೆ
ಮುಂಬದಿ ನೋಡಿದೆ
ಎಡಬದಿ ಬಲಬದಿಯ ಸುತ್ತಿಬಂದೆ,—
ದಣಿದೆನೆಂದೆ.
ನೋಡಿದಲ್ಲೆಲ್ಲ ಕೆಸರಂಥ ಕರಿನೀರೊಳಗಿಂದ
ಮಜ್ಜಿಗೆ ಕಡೆಯುವ ನೀರೆಯ ನೋಡಿರೆ !
ಮೇಘಶ್ಯಾಮನ ಮೈಬಣ್ಣದ ಸಡಿಲದಿಂದ
ತನಿವೆಣ್ಣೆಯ ತೆಗೆಯುವ ಗೋಪಿಯ ನೋಡಿರೆ !
ನೋಡದವರೆಂಥ ಪಾಪಿ !

ಕಾಣದ ಹೆಜ್ಜೆಯ ಗುರುತನು
ಕಾಣುವ ನೀರ ಮೇಲೆ ಬಿಟ್ಟವರುಂಟೆ ?
ಉಂಟು ! ಉಂಟು !
ಇಟ್ಟ ಗರಿಯನು ಬಿಟ್ಟುಬಿಡದೆ ನಿಟ್ಟಿಸುತ
ಹಿಮ್ಮೆಟ್ಟದೆ ಹುಮ್ಮಸದಿಂದ ನಡೆದವರುಂಟೆ ?
ಉಂಟು ! ಉಂಟು !
ಹಗಲೆನ್ನದೆ ರಾತ್ರಿಯೆನ್ನದೆ
ಗೊತ್ತೆನ್ನದೆ ಒತ್ತೆನ್ನದೆ
ಮೂಡಿನಿಂದ ಮುಳುಗಿನವರೆಗೆ
ಸಂಧ್ಯೆಯಿಂದ ಸಂಧ್ಯೆಗೆ—
ಅಟ್ಟಂಬಟ್ಟಂ ಅರಣ್ಯದೊಳಗಿಂದ
ಸಪ್ತಸಮುದ್ರಗಳ ವ್ಯಾಪ್ತಿಯೊಳಗಿಂದ
ವಿಂಧ್ಯಾಚಲದಂತೆ ಗಂಭೀರವಾಗಿ—
ಆದರೆ ಚಲಿಸಿ—
ದಿನದಿನಕ್ಕೆ ಇನನಂತೆ ಹೆಜ್ಜೆಯಿಕ್ಕಿದರುಂಟೆ ?
ಉಂಟು ! ಉಂಟು !

## ನೌಕಾ-ರಾವಣ

ಹಡಗವಲ್ಲವಯ್ಯಾ ಇದು !
ಹದಗಡಕ ! ನಿಶಾಚರ !
ಅಹಿರಾವಣ ಮಹಿರಾವಣ !
ಶೂರ್ಪನಖಿಯ ಆಪ್ತಬಂಧು !

ರಾಶಿರಾಶಿಯಾಗಿ ಬಿದ್ದಿದೆ ನೋಡು—
ಮೀನಗಡಕ ಮೊಸಳೆಯಂತೆ !
ನಕ್ರದಂತೆ ವಕ್ರಾಕಾರ !
ಮೀನದಂತೆ ವಾಯುಜೀವಿ !
ಹೇಗೆ ಕಣ್ಣುಬಿಡುತಿದೆ ನೋಡು
ಒಕ್ಕಣ್ಣ ರಾಕ್ಷಸನಂತೆ !
ಹೇಗೆ ಒದ್ದಾಡುತಿದೆ ನೋಡು
ಜಿಗರೆಯ ಮೆದ್ದ ಹೆಬ್ಬಾವಿನಂತೆ !

ಸುಡುತಿದೆ ನೋಡು ಹೊಗೆಸೊಪ್ಪನು
ಜ್ವಾಲಾಮುಖಿಯಂಥ ಚಿಲುಮೆಯೊಂದರಲ್ಲಿ,
ಬದಿಗೆರಡು ಚಿಲುಮೆಗಳಿರಿಸಿ :
ಮನೆಮಾರಿನಿಂದೆಳೆದು ತಂದು
ಗಂಟಿಕ್ಕಿ ನೂರೊಂದು ನೇಣಿಂದ
ಸೆರೆಯಿಕ್ಕಿದೆ ನೂರೆಂಟು ನಾವಿಗರನು !
ಹಡಗವಲ್ಲವಯ್ಯ ಇದು !
ಹದಗಡಕ ! ನಿಶಾಚರ !

ಮೈಗಣ್ಣನಂತೆ ಮಿಕಿಮಿಕಿ ನೋಡುತಿದೆ ನೋಡು !
ಇಲಿಯ ಗುದ್ದುಗಳಂಥ ದಿಟ್ಟಿಗಳಿಂದ !

ಮೈತುಂಬ ದೀಪ ಹಚ್ಚಿಕೊಂಡು
ಹೊಟ್ಟೆತುಂಬ ಇದ್ದಲಿಯಿರಿಸಿ
ತನ್ನ ಸ್ನಾಯುವಿನ ಮೇಲೆ
ಧಮನಿಯ ಕೆಳಗೆ—
ಓಡಾಡಿಸುತಿದೆ ನಮ್ಮನು,—
ಅನುದಿನವು ಓಡಾಡಿಸುತ್ತಿದೆ ನೋಡು !
ಇದರ ಪ್ರಾತರ್ವಿಧಿಯೇ ನಮಗುಸಿರು, ಅನ್ನನೀರು.
ಇದರಂತ್ಯವಿಧಿಯೇ ನಮಗೆ ಜೀವನ ??

# ಹಡಗದ ಚಂದ

ಒಂದು ಮಾಟವಿದೆ ಮೋಟುಮರದಂಥ ಈ ಹಡಗದಲ್ಲಿ,
ಒಂದು ಕ್ರಮವಿದೆ,—ಯಂತ್ರಯುಗದ ಈ ಭ್ರಮೆಯಲ್ಲಿ !
ಅಂದವಿದೆ,—ಚಂದವಿದೆ ಸಹ ! ತಿಳಿದು ನೋಡಲಿದೀಗ !

ಇದು ದೋಣಿಯಲ್ಲ—ತೇಲುತಿರುವ ಹಿರಿಬಣದೋಣಿ !
ಕಬ್ಬಿಣದ ಕಟ್ಟಡವಲ್ಲ,—ಇಟ್ಟಣಿಸುವ ಪಟ್ಟಣವಿದು !
ಇದು ಬ್ರಹ್ಮಾಂಡ,—ನೂರು ಭಾಷೆಗಳ ನವಖಂಡ !

ಸಪ್ತಸಾಗರದ ಮೇಲೆ ಸೃಷ್ಟಿಯನ್ನು ತೇಲುಬಿಟ್ಟಂತೆ
ವಿಶ್ವಕರ್ಮನು ರಚಿಸಿ ತೇಲುಬಿಟ್ಟನಿದನ್ನು !
ತಿಮಿಂಗಿಲದಂತೆ ತಿರುಗುತಿದೆ ! ತಿರುಗಿಸುತಿದೆ !

ಇಂದು ಭಾರತ, ನಾಳೆ ಅರಬ್ಬಿದೇಶ,
ಇಂದು ಇಜಿಪ್ತದಲ್ಲಿ, ನಾಳೆ ಯುರೋಪಿನಲ್ಲಿ,—
ಇದರಗತಿ,—ಕಾಲಗತಿ ! ಇದರ ವೇಗ,—ವಾಯುವೇಗ !

ಇಲ್ಲಿಯ ಊಟ-ಉಪಚಾರ,—ಮನೆಗಿಂತ ಹೆಚ್ಚು.
ಇಲ್ಲಿಯ ಆಟ-ನೋಟ— ಊರಿಗಿಂತ ಮೆಚ್ಚು.
ಮನದ ಮಹಲನು ಕಟ್ಟಬಹುದು ! ಮನಬಂದಂತೆ ಕುಣಿಯಬಹುದು !

ಇದು ಹಡಗವಲ್ಲ,—ಸಂಕ್ಷಿಪ್ತ ಬ್ರಹ್ಮಾಂಡವಿದು !
ಮಾನವನ ಕೌಶಲ್ಯಕ್ಕೆ ಕಳಸವಿಟ್ಟಿದೆಯಿಲ್ಲಿ.
ನೆರವೇ ಗೆಲುವು, ಔಚಿತ್ಯವೇ ಚೆಲುವು,—
ಎಂಬುದನ್ನು ಬರೆದು ಕೊರೆದು ಸಾರಿದೆಯಿಲ್ಲಿ !

# ಇಲ್ಲಿಯ ನ್ಯಾಯ

ಸುಡು ಈ ಗಾಳಿವೇಗವನ್ನು, ಭೋಗವನ್ನು, ಚೆಲುವನ್ನು !
ಪಯಣವಿಲ್ಲದೆ ನರನು ಬಾಳಿದರೆ—ತಪ್ಪೇನಿತ್ತು ?
ನಿರ್ಮಿಸಿಹನೀಗ ನರಕವನ್ನು ನರಪ್ರಾಣಿಗಳಿಗೆ.
ಒಬ್ಬನ ಸುಖಕ್ಕಾಗಿ ಇನ್ನೊಬ್ಬನಿಗೆ ದುಃಖ :
ಒರ್ವನ ಸ್ವರ್ಗಕ್ಕಾಗಿ ಇನ್ನೊರ್ವನಿಗೆ ರವರವ ನರಕ !
ಇಂತಿದೆ ಇಲ್ಲಿಯ ನ್ಯಾಯ ! ಇಂತಿದೆ ಇಲ್ಲಿಯ ಜೀವನ !
ಅನ್ಯಾಯವೆಂದು ಮುಗಿಯುವದು ?
ವಿವೇಕವೆಂದು ಚಿಗಿಯುವದು ?

ಬಿಳಿಯನಿಗಿದೆ ಮಂಜುಗಡ್ಡೆಯ ತಿನುವಾಸೆ :
ಅದಕೆ ನಂಜಿನಂಥ ಶೆಡ್ಡಿನಲ್ಲಿ ನಿಲ್ಲುವನು ಕರಿಯ.
ಬಿಳಿಯನಿಗೆ ಬೇಕು ಕೈಜೋಡಿಸಿದ ಸೇವೆ,—
ಅದಕೆ ಕರಿಯನಾದ ನಿತ್ಯಸೇವಕ !
ಇವ ಬಿಳಿಯ ಅವ ಕರಿಯ, ಇವ ಹಾರುವ ಅವ ಹೊಲೆಯ,
ಇವ ಸೇವ್ಯ ಅವ ಸೇವಕ, ಇವ ಗಾಣಿಗ ಅವ ಗಾಣ,—
ಇವ ತ್ರಾಣ—ಅವ ನಿತ್ರಾಣ !
ಇಂತಿದೆ ಇಲ್ಲಿಯ ನ್ಯಾಯ ! ಇಂತಿದೆ ಇಲ್ಲಿಯ ಜೀವನ !
ಅನ್ಯಾಯವೆಂದು ಮುಗಿಯುವದು ?
ವಿವೇಕವೆಂದು ಚಿಗಿಯುವದು ?

ಮಾನವಜಾತಿಯನ್ನು ಮಣ್ಣುಮುಕ್ಕಿಸುವ ರೀತಿಯ ನೋಡಿರೆ !
ಪಶುವಿಗಿಂತ ಕಡೆ,—ಪಕ್ಷಿಗಿಂತ ಕೀಳು ಮಾನವನಿಲ್ಲಿ !
ತಲೆಗೆಣ್ಣೆಯಿಲ್ಲ, ಮೈಗೆ ಬಟ್ಟೆಯಿಲ್ಲ—
ಮೈಯಲ್ಲಿಯ ಎಣ್ಣೆ ಮುಗಿಯುವ ತನಕ—
ಕಣ್ಣೆದುರಿನ ಬಟ್ಟೆ ಕಾಣುವ ತನಕ—

ದುಡಿಯಬೇಕು ಮಡಿಯಬೇಕಿಲ್ಲಿ ಮಾನವನು !
ಅಡಿಯಾಳಾಗಿ ನಡೆಯಬೇಕು !
ಇಂತಿದೆ ಇಲ್ಲಿಯ ನ್ಯಾಯ ! ಇಂತಿದೆ ಇಲ್ಲಿಯ ಜೀವನ !
ಅನ್ಯಾಯವೆಂದು ಮುಗಿಯುವದು ?
ವಿವೇಕವೆಂದು ಚಿಗಿಯುವದು !

ದಾಸ್ಯದಲ್ಲಿ ಸಿಲುಕಿ ಗಾಸಿಗೊಂಡ ತಾಯ್ನಾಡೆ !
ಭಾರತದೇವಿ !
ಈ ಬವಣೆ ಮಾತ್ರ ಬರದಿರಲಿ ನಿನಗೆ.
ಪಾರತಂತ್ರ್ಯದಲ್ಲಿ ಬಿದ್ದು ಪಾರಗಾಣದಿರಬಹುದು,—
ಬಡತನ,—ಒಡಕುತನ,—ಎಲ್ಲ ಬರಬಹುದು.
ಆದರೆ ಈ ಮದೋನ್ಮತ್ತತೆಯ ಅಂಧತೆ ಬೇಡ !
ಒಡೆತನದ ನರಕ ಬೇಡ !
ಬಂಡಿವಾಳದ ಬಂಡು ಬೇಡ !
ಅದು ಪರಮ ದಾಸ್ಯ ! ದುಸ್ಸಹ ನರಕ !
ಇಂತಿದೆ ಇಲ್ಲಿಯ ನ್ಯಾಯ ! ಇಂತಿದೆ ಇಲ್ಲಿಯ ಜೀವನ !
ಅನ್ಯಾಯವೆಂದು ಮುಗಿಯುವದು ?
ವಿವೇಕವೆಂದು ಚಿಗಿಯುವದು ?

# ಸುಯೇಜಿನಲ್ಲಿಯ ಹಡಗ

ಕಂಬಿಯಿಲ್ಲದ ಗಾಡಿಯಂತೆ ಸುಂದಾಗಿ ಸಾಗಿದೆ ಹಡಗ :
ಇದಕಾವ ಪಿಡಗು ಬಂತು ?
ಕಲ್ಲು ತಾಕಿದ ಹಾವಿನಂತೆ ಮೆಲ್ಲನೆ ಹೊಟ್ಟೆ ಹೊಸೆಯುತಿದೆ :
ನಡೆದಿರುವದೇತಕ್ಕಿಂತು ?

ನೀಲಕಾಯರ ನೆಲದಡಿಗ ಕೋಲಾಹಲವೆಬ್ಬಿಸಿ
ಹೊನ್ನನ್ನು ನುಂಗಿ, ದಂಗೆ ಹಾಕಿ,
ಕೆಂಪು ಕಡಲೊಳಗಿಂದ ಕಳ್ಳನಂತೆ ನುಸುಳಿ
ನೀರಿಲ್ಲದ ಕಾಲುವೆಗಳಲ್ಲಿ ನೂಕಿ,—
ಮುಳ್ಳುಗಂಟೆಗೆ ಮಣಿದು, ಅಂಬೆಗಾಲಿಕ್ಕಿ, ಹವಣಿಸಿ,
ಉಳಿಯಲೆಂದೋಡುವವನಂತೆ,—
ಸಮುದ್ರಚೋರನಾಗಿ ಸರೋವರಕೆ ಕೈಮುಗಿದು,
ಕಹಿಕೊಳದಡಿಗೆರಗಿ, ಜಪ್ಪಿಸುವವನಂತೆ,—
ಅರಣ್ಯಕ್ಕೆ ಸಾಗರಬಿದ್ದು, ಅಡಿಯಿಟ್ಟು ತೂಕದ ಮೇಲೆ,
ಹೆಜ್ಜೆಹೆಜ್ಜೆಗೆ ಮುಂದೆ ಹೋಗಿ,
ಬದುಕಲು ಹಾತೊರೆವ ಜೀವಗಳ್ಳನಂತೆ
ನಡೆದಿದೆ ಸುಳ್ಳುವಿನಯದಿ ಬಾಗಿ !
ಮೊಸಳೆಯಿದು ಕೆಂಪು ಕಡಲ ತೊರೆದು ಬಂದು
ಒದ್ದಾಡಿತುಸುಬಿನರಣ್ಯದಲ್ಲಿ !
ಸಾಯುತಿತ್ತು ನೀರಬೇಡಿ, ಕಡಲ ನೊರೆಗಾಗಿ ಮೊರೆದು,
ಬೇಯುತಿತ್ತು ಬಿಸಿಲಿನಲ್ಲಿ !
ಬಂದನಾಗ ಭೂಮಧ್ಯಸಮುದ್ರದ ಕುವರ,—
ಅಂಗೈಯ್ಯ ಮೇಲೆತ್ತಿ ಮೊಸಳೆಯ
ನೀರುಗೆಯ್ಯಿಂದದನು ಹಿಡಿದೆಳೆದ ಕಡಲೆಡೆಗೆ :
ಆಗ ಘೂರ್ಣಿಸಿ ಮೊಸಳೆ ಕೂಡಿತ್ತು ಸಾಗರವ !

# ನಾಟ್ಯಶಾಲೆ

ಒಂದು ಕ್ಷಣವಾದರೂ ಬಗೆದೆ ಯಂತ್ರಾಗಾರವದು ನರಕವೆಂದು.
ಎಣಿಸಲಾರೆನರೆನಿಮಿಷ ಸಹ ನಾಟ್ಯಶಾಲೆಯಿದು ಸ್ವರ್ಗವೆಂದು.
ಇಂದ್ರನ ರಾಜ್ಯವಿದಲ್ಲ,—ಇಂದ್ರಿಯಗಳ ರಾಜ್ಯವಿದು,
ಮಿಟಿಮಿಟಿ ಸ್ವರ್ಗ, ತ್ರಿಶಂಕುವಿನಮರಪುರಿ !
ದಾರಿ ತಪ್ಪಿ ನಡೆದ ಮಾನವನು ಮೇರೆದಪ್ಪಿ ಹೆಜ್ಜೆಯಿಕ್ಕಿ
ಸುಖವ ದೊರಕಿಸಲೆಂದು ಹೂಡಿರುವ ಮೋಸವಿದು,—ಆತ್ಮವಂಚನೆಯೆಲ್ಲ !
ಮೇನಕೆಯ ರಂಗಭೂಮಿಯಿದು ! ಎಚ್ಚರಿಕೆ ! ಜೀವವೆ !

'ರಾತ್ರಿ'ಯೆಂಬ ಹೆಸರಾಂತು ಬಣ್ಣ ಬಡಿದುಕೊಂಡು
ಗಂಡಿನೊಡನೆ ಬತ್ತಲೆಗುಣಿತವ ಕುಣಿವ ಹೆಣ್ಣೆ !
ತಿಳಿದಿಲ್ಲ ನೀನು ರಾತ್ರಿಯದೆಂಥ ಧಾತ್ರಿಯೆಂಬುದನು.
ಮುಗಿಲಿನಲ್ಲಿ ನಕ್ಷತ್ರಗಳಕ್ಷೋಹಿಣಿಯನಾಡಿಸುವ ಮಾತಾಯಿಯ ನೋಡು !
ಸಮುದ್ರವೆರಗುವದು ಬಂದವಳಡಿಗೆ ;
ಕಾಲಿಡು ಹಡಗದ ಹೊರಗೆ : ತೆರೆಗಳು ತರಿದೊಗೆಯುವವು ನಿನ್ನನ್ನು ಹಿಂಡಿ.
ಮೈಮುಚ್ಚುವ ಬದಲು,—ತೆರೆಯುವ ಕಾಳಿಂದಿ ಸೀರೆಯೊಂದನುಟ್ಟು
ಅದರಂಚಿಗೆ ನಾಲ್ಕು ಮುತ್ತುರತುನಗಳ ಹೊಂದಿಸಿ
ಕ್ಷಯ ಹತ್ತಿದ ಚಂದ್ರನಂತೆ ಬಣ್ಣವೇರಿದ ಮೊಗ ತೋರಿಸಿದಲ್ಲಿ
ರಾತ್ರಿಯಾದೆಯಾ ನೀನು ? ಅಪರಾತ್ರಿ ! ತೊಲಗಿಲ್ಲಿಂದ !

ನೂರು ದಿವಸ ಒಳಿತಾಗಿ ಬಾಳಿ ಮೂರು ದಿವಸ ಹೋಳಿಯಾಡಿದಂತೆ
ಒಂದು ದಿವಸದ ಮೋಜಿಗಾಗಿ ನಿರ್ಮಿತವಾದ ನಾಟ್ಯಪದ್ಧತಿಯಿದು
ಬಲಿಯುತಿದೆ,—ಕೊಳೆಯುತಿಹನು ಮಾನವನದರ ಗೋಜಿಗೆ ಹೋಗಿ.
ಸಮಾಜವೆಲ್ಲ ನಾಟ್ಯಶಾಲೆಯಾಗಿ ಸಂಸಾರವೆ ವಿರಳವಾಗಿದೆಯೀಗ.
ದಿನದ ಬಾಳೆಲ್ಲ ಹೋಳಿಯಾಗುತಿದೆ, ಪ್ರೇಮವು ಕಾಮವಾಗುತಿದೆ.

ಗಂಡಾದರೆ ಸಾಕು,—ಗಂಡನವ ! ಹೆಣ್ಣಾದರೆ ಸಾಕು,—ಹೆಂಡತಿಯವಳು !
ಇಲ್ಲಿಗಿಳಿದಿದೆ ಸಂಕರ : ಇದಕಿಂತ ಭಯಂಕರವೇನು ?
ಮನೆಗೊಂದು ರಾಮಾಯಣವಿರಲು,—ಬರೆಯುವನೆಂತು ನವವಾಲ್ಮೀಕಿ ?
ಓಣಿಗೊರ್ವ ಅಹಲ್ಯೆಯಿರಲು,—ಉದ್ಧರಿಸುವನೆಂತು ಪತಿತಪಾವನ !
ತುಂಬುತಿದೆ ಕೊಡ, ಹೊಮ್ಮುತಿದೆ ಗಾನ, —ಒತ್ತರಿಸುತಿದೆ ನಾಟ್ಯ :
ಜಗವೆಲ್ಲ ಭ್ರಮಿಸಿ ಬೇಸತ್ತು ಮತ್ತಾತ್ಮಹತ್ಯಕಣಿಗೊಂಡು
ಔತಣವನೀಯುತಿದೆ ಪ್ರಳಯಾಗ್ನಿಪುರುಷನಿಗೆ !

## ಕಪ್ತಾನ

ಹಿಂಸಿಸುವರು ನನ್ನನ್ನು ಸಾಮ್ರಾಜ್ಯವಾದಿಯೆಂದು :
ದೂಷಿಸುವರು ನನ್ನನ್ನು ಮಹಾಪಾತಕಿಯೆಂದು.
ಶಕ್ತಿಹೀನರ ಉಕ್ತಿಗಳಿವು, ಬಲವಂತರ ಬಲ್ನುಡಿಯಲ್ಲ !
ಪಂಜರದಿಂದ ಇಲಿಯನ್ನು ಹಿಡಿದ ಬೆಕ್ಕಿಗೆ ಹೇಳಿರಿ—ತಿನ್ನದಿರೆಂದು.
ಆನೆಯ ತಲೆ-ಮತ್ತನುದುರಿಸಲು ಕಾಲೆತ್ತಿದ ಸಿಂಹಕುಸಿರಿರಿ—
ಸೊಕ್ಕದಿರೆಂದು.
ಹುಲ್ಲೆಯ ಹಿಡಿದ ಹುಲಿಯ ರಂಬಿಸಿರಿ—ಬಿಟ್ಟುಬಿಡೆಂದು.
ಹುಚ್ಚು ಮಾತಿದು ! ಬಲವಿದ್ದರೆ ಗುದ್ದು,—ಇಲ್ಲದಿರೆ ಗುದ್ದಿದನಿದೊ !
ಜೀವವ ಹಿಂಡಿ ಬದುಕುವೆಸಕ ಸಹಜವೆಂಬುದ ತಿಳಿಯದಿಹರೆ ?

ಪ್ರಭುತ್ವವನೆಂತು ಬಿಡಲಿ ? ರಾಜ್ಯವನ್ನೆಂತು ಒಲ್ಲೆನ್ನಲಿ ?
ಒಲ್ಲೆಂದರೆ ಬಂದು ಪಾದಕೆ ಬೀಳುವರು ರಾಜಾಧಿರಾಜರು,—
ತೆರವಾದ ಕಿರೀಟಗಳು ಬಂದು ಮೆರೆಯುವವೆನ್ನ ತಲೆಯ ಮೇಲೆ.
ಗತಿಗೆಟ್ಟ ರಾಜ್ಯಗಳಾಮಂತ್ರಿಸುವವೆನ್ನನಾಳಲಿಕ್ಕೆ—
ಗೊಂಬೆಗಳಂತೆ ಜನರೊಪ್ಪಿಸುವರೆನಗೆ ರಾಜ್ಯಸೂತ್ರಗಳನ್ನು !

ನೀರು, ಬೆಂಕಿ, ನೆಲ, ಗಾಳಿಯಾಕಾಶ,—ಇವೆಲ್ಲ
ಬಲ್ಲವೆನ್ನ ಶಕ್ತಿಯನು ! ಪ್ರಕೃತಿ ನನ್ನಯ ದಾಸಿ.
ನನ್ನ ಶೋಧವು ಪ್ರತಿಸೃಷ್ಟಿ,—ಅಮೃತವನೊಂದುಳಿದು ನನ್ನದೆಲ್ಲ !
ಇದನೆಲ್ಲ ಗುಂಪಿಮಾನವರೊಡನೆ ಪುಕ್ಕಟೆಯಾಗಿ ಹಂಚಿಕೊಳುವದೆ ?
ದುಡಿಯಲಿ ಆಳಾಗಿ,—ಪಡೆಯಲಿ ಸಾಮಗ್ರಿಗಳನ್ನು !
ಮಾನವನು ನಾನು ; ಸೊಕ್ಕಿದೆ ನನಗೆ ! ನಿರ್ಲಿಪ್ತ ನಿರ್ಜನರಲ್ಲ !

ಕಪ್ಪುಬಣ್ಣದವನು ನನ್ನೆದುರು ಮೈಮುರಿದು ದುಡಿಯುವಾಗ—
ನಾಯಿಯು ಮೂಸದ ಹೇಸಿಗೆಯನ್ನು ಹೊತ್ತು ಹೊತ್ತು ತರುವಾಗ—
ನನಗೆ ಹೊಳೆಯುವದೊಮ್ಮೊಮ್ಮೆ,—ನಾನು ಮಾಡಿದುದು ತಪ್ಪೆಂದು.
ಹುಲುಸಾಗಿ ತಿಂದು ಮದಿರೆಯ ಕುಡಿದು ನಾನು ಮನಬಂದಂತೆ
ಕುಣಿವಾಗ—
ಹಗಲೆಲ್ಲ ದುಡಿದು ಹಣ್ಣಾಗಿ ಮತ್ತೆ ಹಡಗವ ನಡೆಸಲವನು ನಿಂತಿರಲು—
ಕಣ್ಣು ಮುಚ್ಚಿ ಯಂತ್ರದ ಮೇಲೆ ಕೈಯಿಟ್ಟು ಮನೆಯ ಮಂತ್ರವ
ಜಪಿಸುತಿರಲು—
ನನಗೆನಿಸುವದು ಕ್ಷಣಕ್ಷಣಕೆ,—ನಾನು ಮಾಡುವದು ತಪ್ಪೆಂದು
ಪ್ರೀತಿಯೆಲ್ಲ ಪ್ರೇತವಾಗಿ ಪ್ರೇಮವೆಲ್ಲ ಕಾಮವಾಗಿ. ಒಗೆತನವೆಲ್ಲ
ಹಗೆತನವಾಗಿ
ಪರಿಣಮಿಸಿದಾಗ,—ತಲೆಯೆಲ್ಲ ಭ್ರಮಿಸಿದಾಗ—
ಅರೆನಿಮಿಷ ಕಂಪಿಸುವದೆದೆಯೆಲ್ಲ,—ನಾನು ಮಾಡಲಿಹುದು ತಪ್ಪೆಂದು.

ಮತ್ತೆ ಎಚ್ಚರಿದು ನೋಡುವೆನು ನನ್ನ ಹಡಗವನ್ನು.
ಮುನ್ನೀರನೆಂತು ಭೇದಿಸಿ ಪಯಣ ಬೆಳೆಸಿದೆ ನೋಡು !
ಈ ಮಹಾದ್ಭುತವ ಬಿಟ್ಟು ಏನಯದಿಂದಿರಬೇಕೆ ?
ಆಗದು ! ಆದಾಗದು ! ದೈವಪರೀಕ್ಷೆಯಾಗಿಬಿಡಲಿ !
ಹೊನ್ನಿನ ಗಟ್ಟಿಯಂತೆ ಗಟ್ಟಿಯಾಗಿದೆ ನನ್ನ ದೈವವಿಲ್ಲಿಯುವರೆಗೆ !
ಅದು ಪೊಳ್ಳಿದ್ದರೆ,—ಹಾಗೊಮ್ಮೆ ಅನುಭವ ಬರಲಿ !

# ನೌಕಾಯಂತ್ರ

ಹಡಗದ ಹಗೆಯಲ್ಲಿಳಿದಿಳಿದು ಗವಿಯನೊಳವೊಕ್ಕು ಸಾಗಿದೆವು ದೂರ,
ಸುದೂರ,—
ನೀರೊಳಕೆ ಹಾಯ್ದು ಹಡಗದ ತಳದ ಗರ್ಭದೊಳು ನೂಕಿ.
ಇದೇನು ತಿಮಿಂಗಿಲ ತಿಮಿರ ! ನಿಶಾಚರರ ದಿಶೆಯೇನಿದು ! ಜಲಚರಗಳ
ಜಗವು !
ಇಟ್ಟಿ ಕಾಲೆಳೆಯುತಿದೆ ಜಾರಿ ಯಮಲೋಕಕ್ಕೆ !
ಹರಿಯುತಿದೆ ನೋಡಲ್ಲಿ ಕೊಳಚೆ ನೀರು,—ರವರವ ನರಕದಲ್ಲಿ !
ಮೇಲೆ ತಲೆತಿರುಗಿ ಕಣ್ಣೆತ್ತಲು, ಕಾಣುವ ಕಪ್ತಾನನ ಕೋಣೆಯೇ ಮುಗಿಲಿಲ್ಲಿ!
ಇಲ್ಲಿಯು ಯಮರಾಜನವನು,—ಇಂದ್ರಚಂದ್ರನೀ ಲೋಕಕೆ :
ಅವ ಸನ್ನೆಗೆಯ್ದಂತೆ ವರ್ತಿಸುವವಿಲ್ಲಿರುವ ಪ್ರಾಣಿಗಳು.
ತೀರ ಕೆಳಗೆ ಸಮುದ್ರ,—ಅದರ ಮೇಲಿಹುದು ಸಿಹಿನೀರ ಕೆರೆ
ಕಬ್ಬಿಣದ ಹೊದಿಕೆಯಲಿ,—ಅದರ ಮೇಲ್ನಿಂತಿಹುದು ಯಮಲೋಕವಿದು.
ಹೀಗೆ ಬಾ, ಇತ್ತ ಬಾ, ಹಿಡಿದು ಸಾಗೀ ಕಬ್ಬಿಣದ ಕಂಬಿಯನು :
ಇಲ್ಲದಿರೆ ಪುಡಿಪುಡಿ ಮಾಡಿ ಚೆಲ್ಲೀತು ಸುತ್ತುತಿಹ ಚಕ್ರವದು :
ಇಲ್ಲಿಹುದು ನೋಡು ಚಕ್ರವ್ಯೂಹ : ಗರ್ರನೆ ತಿರುಗುತಿವೆ ಗಾಲಿಗಳು
ಯಮನ ಕಣ್ಣಾಲಿಗಳಂತೆ : ಅಣಿಗೊಳಿಸಲೆಂದು ನಿಂತಿಹರು ದೂತರಿವರು ;
ಅವರಿಗುಸಿರೆಂಥ ಮರಣವು ನಿನ್ನದಿರಲೆಂದು. ಹಾ ! ಬಾಗಿಲ್ಲಿ !
ಜಂತಿಭಿಂತಿಯ ಮೇಲೆ ಕೈಮೆಯ್ಯ ತಳಕಿಕ್ಕಿ
ಹೊಟ್ಟೆ ಸರಿದುಬ್ಬಿ ಬರುತಿವೆ ನೋಡು ಹೆಬ್ಬಾವು : ಏ ಗುಬ್ಬಿಮಾನವ !
ಏಳು ! ಹಾರಿಲ್ಲಿಂದ ! ಇಲ್ಲದಿರೆ ಮಡಿದೆಯೆಂದು ತಿಳಿ !
ಇದು ನೋಡು,—ವಾಯುವನು ನುಂಗಿ ನೀರ್ಕುಡಿದ ಘಟಸರ್ಪ :
ಬಾಯ್ದೆರೆದು ಗಾಳಿ ಬಿಡುತಿದೆ : ಇಲ್ಲಿಯದರ ವಿಹದುಸಿರು ಸಹ
ತಂಪಮೃತದಂತೆ : ಮತ್ತಿದು ಕಾಳಸರ್ಪ : ಉಗಿಯನೊಯ್ದು ಯಂತ್ರಕೆ
ಮಂತ್ರಿಸಿ
ಹುಟ್ಟು ಕಡೆಸುವ ಮಹಾತಂತ್ರ !

ಅಲ್ಲಿ ಬೇಡ ! ಹುಟ್ಟುತಿಹುದಲ್ಲಿ ಸಹಿಸಲಸಾಧ್ಯವಾದ ಬೆಳಕು,—
ವಿದ್ಯುತ್ತು : ಮಿಂಚಿನ ಹೊಂಚಿನಲಿ ಹಂಚಿನಂತೆ ನೀ ಹುರಪಳಿಸಬಹುದು.
ಉಗಿಯೆಲ್ಲ ಮಿಂಚಾಗುವದಿಲ್ಲಿ, ಇಲ್ಲಿಗೊ ! ಸದ್ದಿಲ್ಲದೆ ತಮ್ಮ ಮೈಸುತ್ತ
ಸುಳಿಸುಳಿ ತಿರುಗುತ್ತ
ಬಿದ್ದುಕೊಂಡಿವೆ ಮೀನದಂಥ ಪ್ರಾಣಿಗಳು : ತಡವಬೇಡಿವುಗಳ ಹಸಿವನು,
ಉಗಿಮಾಡಿ ನುಗಿಸಬಹುದು ನಿನ್ನನು. ಮತ್ತಿಲ್ಲಿ ! ಎಚ್ಚರಿಕೆ !
ಸುಧನ್ವನ ಕಾಸಿದಂತ ಕೊಪ್ಪರಿಗೆಗಳಲಿ ಗಪ್ಪಾಗಬಹುದು ನೀನು !
ಮುಟ್ಟಬೇಡ ಆ ಹುಟ್ಟನು ; ತರುವದು ನಿನ್ನ ಸಾವನದು ನಿಮಿಷದಲಿ.
ಧಗಧಗಿಸುವ ಸೆಕೆಯಲ್ಲಿ ಬೂದಿಯಾಗಿ ಬಿದ್ದೀ ನೀನು
ನಿಂತರೆ ಟರ್ಬೈನಿನ ಹತ್ತಿರ !
ಹಲ್ಲುಗಟಕರಿಸಿ ಸೆಟೆದು ಮಂಜುಗಲ್ಲಾಗಿ ನಿಂತೀ ನೀನು
ಹೋದರೆ ಮಂಜಿನಾಗಾರಕೆ !
ಟಕಮಕನೆ ತಿರುಗಿ ಟಕ್ ಟಕ್ ಎಂದು ಶಕುನದ ಹಕ್ಕಿಯಂತೆ ಕಟೆಯುತಿದೆ
ನೋಡು

ತಿರುಗುಮುರುಗಳೆಯುವ ತಿರುಪೊಂದು.
ಲೊಚ್ ಲೊಚ್ ಎಂದು ಹಿರಿ ಹಲ್ಲಿಯಂತೆ ಲೊಚಗುಡುತಿದೆ ನೋಡು
ಬೇರೊಂದು ಬಗೆಯ ಮಾಪೊಂದು !
ಹಸಿರು ಕೆಂಪು ಮಾಟದ ಗೊಂಬಿಗಳು ಮೂಡಿ ಮತ್ತೆ ಮಾಯವಾಗುತಿಹವಿಲ್ಲಿ
ಆಹುತಿಗಾಗಿ ಹಾತೊರೆದ ಮರುಳ್ಗಳ ಕುಣಿತ ನಡೆದಿಹುದಿಲ್ಲಿ !
ಅಯ್ಯೋ ! ದೇವನಿಂದ ಜೀವಗುವರನನೆಳೆತಂದು
ನೀರುನೆಲದ ಮಮತೆಯ ಬಿಡಿಸಿ ಕೊಲ್ಲಲು ಹಾಕಿದ ಹೊಂಚಿದು ಕಾಣರೊ !
ಯಾವ ಮಾಂತ್ರಿಕನ ಮೋಸವಿದು ? ಯಾವ ಯಾಂತ್ರಿಕನ ಕೃತಿಯಿದು ?
ಹೇಗೆ ಬಂದೆನಿಲ್ಲಿ ? ದಾರಿ ಯಾವುದು ಹೊರಗೆ ? ಏನಿದು ? ಏಕಿದು ?
ಕಾಗೆಗಳ ಹಿಂಡಿನಲಿ ಸಿಕ್ಕ ಪರಪುಟ್ಟನಂತೆ ವಿಲಿವಿಲಿ ಒದ್ದಾಡಿದೆ,

ಆರ್ತ್ತಕರೆದೆ, ಚೀರಿದೆ. ಹೆಬ್ಬಾವು ಬಂದು ಸುತ್ತಿದವು,
ಮೀನು ಬಂದು ಮುತ್ತಿದವು, ಗಾಲಿ ಬಂದು ಎತ್ತಿದವು,—

ನಿಲ್ಲಲು ನೆಲವಿಲ್ಲದಾಯ್ತು, ಮರೆಹೊಗಲು ಮರುಕವಿಲ್ಲದಾಯ್ತು, ಕಣ್ಗೆ -
ಕತ್ತಲೆಯಾಯ್ತು—
ಅಯ್ಯೋ ! ಸತ್ತೆ ! ಸತ್ತೆ ! ಸತ್ತೆ !!

ಅಲ್ಲ ! ನರಕರವಲ್ಲವಿದು : ಮಾನವನು ನಿರ್ಮಿಸಿದ ಯಂತ್ರಶಾಲೆ,—
ನಿಯಮಗಳನು ಪಾಲಿಸುವದಿದು : ಕಿವಿಯಲುಸುರಿದಂತೆ ಆಲಿಸುವದು.
ಮುಗಿಲೊಳಗಿಂದ ಕಪ್ತಾನನೆಳೆದ ಗೆರೆಯನು ದಾಟಲಾರದಿದು.
ಮತ್ತಿಲ್ಲಿ ನೋಡು : ದುಡಿಯುವರು ನಿನ್ನಂಥ ಮಾನವರಿಲ್ಲಿ ಸಂಬಳಕಾಗಿ.
ಈ ಮಹಾಯಂತ್ರದಿಂದ ಮುನ್ನಡೆಯುವದು ಹಡಗ,—
ಇಡಿಯ ಪಟ್ಟಣವೊಂದು ತೇಲುವದು ನೀರ ಮೇಲೆ !
ಇದು ನರಕವೆನ್ನುವದು ಕುರುಡುತನ, ಅಜ್ಞಾನ.
ಅಲ್ಲಿ ಮೇಲಿನ ಮಹಲಿನಲಿ ಕುಳಿತಿಹನು ನೋಡು ಕಪ್ತಾನನು,—
ಈ ಸೃಷ್ಟಿಯ ವಿಷ್ಣುವೀ ಜ್ಞಾನದ ಮಹರ್ಷಿ !
ಅವನ ಕೋಣೆಯಲಿ ಸಂಚಿತವಹುದೀ ಯಂತ್ರದ ಮೂಲಮಂತ್ರ,—
ವೀ ರಾಜ್ಯದ ಸೂತ್ರಗಳು. ರಾಕ್ಷಸೀ ವ್ಯಾಪಾರವಿದನು,—
ಮತ್ತೀ ನಾವಿಗರ ಕ್ಷಾತ್ರ ತೇಜವನು—
ಅಂಕಿತದಲಿಡಬಹುದು ಅವನ ಬ್ರಹ್ಮಜ್ಞಾನ !
ಕಂಡಿರುವರಾರದನು ? ಹಿತಕಾಗಿ ವ್ಯಯವಾಗುವೀ ತಾಮಸೀ ಶಕ್ತಿ
ರುದ್ರಭಯಂಕರವಾಗಬಹುದು ಮುಂದೆ. ಬೆಂಕಿಯ ಮಳೆಗರೆಯಬಹುದು.
ಇಂದು ಹೊಳೆದ ಚಮತ್ಕೃತಿಯೆ ಮುಳುವಾಗಬಹುದು ಮಾನವಗೆ ನಾಳೆ !
ತನ್ನ ತಂದೆಯನೆ ಮೆಟ್ಟಿ ತುಳಿಯಬಹುದದು ಭಬ್ರುವಾಹನನಂತೆ :
ಮುಳುಗಿಸಿಹುದಿಂದು ಮಾನವ ಜಾತಿಯನು ದಾಸ್ಯವೃತ್ತಿಯಲಿ :
ಯುದ್ಧಗಳ ಪುನರಾವೃತ್ತಿಯಲಿ ನಾಳೆ ಸಂಹರಿಸಲದನು ಸಂಪೂರ್ಣ,—
ಆಗ ಮನುವಂಶವನು ಮತ್ತೆ ಬದುಕಿಸಬಲ್ಲ ಕೃಷ್ಣನಾರು ?

ಏನಿಹುದೊ ದೈವದ ಮಡಿಲಲ್ಲಿ,—ಇದ್ದಲ್ಲಿಯೇ ಮಡಗಿರಲಿ !
ಕಾಲ ಬರುವ ಮುನ್ನ ಕೀಳಬೇಡದನು ಸೋಜಿಗಕಾಗಿ.

ಕಾವ್ಯವನು ಬಗೆ,—ಅದರ ಪರಿಣಾಮವಾಗಿ ಎಷ್ಟುಪಕಾರಿ,
ಎಷ್ಟಪಕಾರಿಯೆಂಬುದನು ಹೇಳಬಲ್ಲವರಾರು ?
ಎಲ್ಲದರ ದೈವದಂತಿಹುದೀ ವಿಜ್ಞಾನಚಮತ್ಕೃತಿಯ ದೈವ.
ಎಲ್ಲ ದೈವಾಧೀನ. ಫಲಜ್ಯೋತಿಷದ ಹಾದಿಯನೆ ಬಿಟ್ಟು
ಆಗು-ಹೋಗುವದರ ಸಾಮುದ್ರಿಕವನೆ ತೊರೆದು
ನೋಡು ಸಮುದ್ರವ ಕೊರೆದು ನಡೆದೀ ಮಹಾಯಂತ್ರವನು !
ಅನುಭವಿಸದರ ರುದ್ರಭಯಂಕರ ಸೌಂದರ್ಯವನು,
ಭವ್ಯ ವಿಭವವನು, ಕ್ರಮವನು, ಸಿಸ್ತನು !
ಯಂತ್ರಾಗಾರವಹುದಿದು ಕಬ್ಬಿಣದಿ ವಿಜ್ಞಾನ-ಕವಿಯೊರೆದ ಮಹಾಕಾವ್ಯ !
'ಕಬ್ಬಿಗರ ಕಾವ'ವ ತಿಳಿದವನೆ ! ತಿಳಿಯೀ ಕಬ್ಬಿಣದ ಕಾವ !
ಪದವಿಲಾಸವನರಿತವನೇ ! ಕುರಿಯೀ ಧಾತುವಿನ ಹದವ !
ಇಲ್ಲಿದೆ ಜಕ್ಕಣಾರ್ಯರ ವಾಸ್ತುಶಿಲ್ಪ, ರವೀಂದ್ರರ ಚಿತ್ರಕಲೆ,
'ಲೇಓಕೂಓನ್'ದಲ್ಲಿಯ ಮೂರ್ತಿಶಿಲ್ಪ, ತಾಂಡವನೃತ್ಯದ ನೆಲೆ,
ಪಂಪನ ಕಾವ್ಯರಚನೆಯ ಮಹಾದ್ಭುತ ! ಕಲ್ಲು ಮಣ್ಣಿನಲ್ಲಿ,
ಬಣ್ಣದಲ್ಲಿ, ವರ್ಣಾಕ್ಷರದಲ್ಲಿ, ಮೆಯ್ಯ ವಿಧವಿಧದ ನಿಲುವಿನಲ್ಲಿ,—
ತನ್ನಲಿಹ ಬುದ್ಧಿವೈಭವವನರಳಿಸಲು ಬಾರದೆ
ಕಟ್ಟಿವನು ವಿಜ್ಞಾನಮಹರ್ಷಿ ಕಬ್ಬಿಣದಲೀ ಕಟ್ಟುಕಥೆಯ !
ಅತಿ ಸರಸವಾಗಿ ಮಿಡಿದೀ ವೀಣೆಯನು—
ಗುರುತಿಸಿ ಸ್ವರಗಳನು ಕೈಯಾಡಿಸೀ ಪಿಯಾನಿನ ಮೇಲೆ—
ಕಂಡದರ ಹ್ರಸ್ವದೀರ್ಘವನು, ಏರಿಳಿತವನೆಲ್ಲ—
ಸರಿ-ಗಮ ಸರಿ-ಗಮ ಎಂದೊರೆವ ಭೂಪನಿವ ಕಪ್ತಾನ,—
ಸಮುದ್ರಸಂಗೀತದ ಶಾಸ್ತ್ರವನೆಲ್ಲ ಬಲ್ಲ ರಸಿಕ !

# ಕಮ್ಮರ್ ದಿಣ್ಣೆಯಿಂದ

(ಆ:ಕ್ಸ್‌ಫರ್ಡಿಗೆ ಸಮೀಪವಾಗಿದ್ದ ಹಳ್ಳಿಯ ಗುಡ್ಡ)

ಮಾಗಿಯು ಹಿಮ್ಮೆಟ್ಟುವ ಮುನ್ನ
ಮಾಗಿಯು ಹೊನ್ನಾಗಿಸಿದ ಹಸಿರೆಲೆಗಳನ್ನು
ಕುಳಿರು ಬಂದು ಮಣ್ಣುಗೂಡಿಸುವ ಮುನ್ನ
ಬೂದಿಬಣ್ಣದ ಮಂಜು ಬಂದು
ಬೀದಿಬೀದಿಗೆ ಬೀಳುವ ಮುನ್ನ,—
ಆಂಗ್ಲದೇವಿ !
ನೋಡಿದೆನು ನಿನ್ನ ಮಲೆನಾಡನು,
ನೋಡಿದೆನು ನಿನ್ನ ದೇಹಸೌಷ್ಠವವನು,
ನಿನ್ನ ಚೆಲುವಿಕೆ—ನಿಲುವಿಕೆಯನು,
ನಿಸರ್ಗಸಿದ್ಧ ಪ್ರಕೃತಿಸೌಂದರ್ಯವನು !

ಕಮ್ನರದ ಕಮ್ಮರಗನೆಲ್ಲ ನೋಡಿದೆ—
ಬಣ್ಣಬಣ್ಣದ ಹೂವನ್ನು ಕಣ್ತುಂಬ ನೋಡಿ ದಣಿದೆ :
ಸೇವಂತಿಗೆ, ಗುಲಾಬಿ, ಚೆಂಡುಹೂ, ದುಂಡುಹೂ,
ಮಂಜಿನಲ್ಲಿ ಮಾಟಾಗಿ ಕೊರೆದಂಥ ಹೂ,—
ಗೊಂಚಲು ಗೊಂಚಲಾಗಿ ಹಣ್ಣು ಮಿಂಚುವ ಮರಗಳನ್ನು—
ಚಂಚುವಿಡುವ ಪಕ್ಷಿಯಂತೆ ಚಂಚಲನಾಗಿ ನೋಡಿದೆ !
ನೋಡಿದೆ ನಿನ್ನ ಭವ್ಯದಿವ್ಯ ಬಯಲುಗಳನ್ನು,
ಹಚ್ಚ ಹಸಿರನು ಮೆಚ್ಚುವಂತೆ ಹಾಸಿದ ತಗ್ಗು ದಿನ್ನೆಗಳನ್ನು,
ಹುಲುಸಾಗಿ ಬೆಳೆದ ಹುಲ್ಲನ್ನು,
ಚಿತ್ರವಿಚಿತ್ರವಾದ ಬೇಲಿಯನ್ನು.

ನಿನ್ನ ನಾಡಿದು ನಂದನವನವೆನುತಿದ್ದೆನು : ಆಂಗ್ಲದೇವಿ !
ಆದರೆ ನಿನ್ನ ಸೌಂದರ್ಯವು ಭಯಾನಕವಾಗಿಹುದೆನಗೆ !
ನೂರು ಕವುತನೂರುಗಳನು ಹಾಳುಮಾಡಿ
ಬೆಳೆದಿತು ನಿನ್ನ ಕವುನೂರ ಸಂಪತ್ತು ;
ನೀನು ಆಂಗ್ಲ, ನಾನು ಭಾರತೀಯ,—
ಬಾರದಿಲ್ಲಿ ಹೃದಯದ ದಂಪತ್ತು !
ನೀನು ಸುಂದರಳಹುದು : ಆದರೆ ನಿನ್ನ ಸೌಂದರ್ಯವ
ಗಮನಿಸಲಾರೆ : ಕ್ಷಮಿಸೆನ್ನನು, ಆಂಗ್ಲದೇವಿ !

ನಿನ್ನ ಮಕ್ಕಳು ಹಿಂಡಿ ಹಿಪ್ಪೆ ಮಾಡಿದ ಸಿಪ್ಪೆ ನಾನು,—
ನನ್ನ ಬಣ್ಣನೆ ನಿನಗೇಕೆ ಬೇಕು ?
ನನ್ನತಾಯ್ನಾಡನ್ನು ಸುಲಿದು ಒಲಿದರು ನಿನ್ನೊಳು ತಾಯಿಯೆಂದು
ಬಡವನ ನುಡಿಯ ತೊಡವೇಕೆ ನಿನಗೆ ?
ನಿನ್ನ ಸಂದಿಗೊಂದಿಯನು ಮೂಲೆ–ಕೊಂಪೆಯನು ಸಹ
ಜಗಕೆತ್ತಿ ತೋರಿಸಿದರು ನಿನ್ನ ಕವಿಗಳು :
ನನ್ನ ನಾಡಿನ ಹಾಡಿಗೆಂದು ಮುಡಿಪಿರಲಿ ನನ್ನ ಜೀವ.

ಯುರೋಪಿನ ನಂದನವನಗಳಿರಾ !
ಹೊರವುಗಲಿ ನಿಮ್ಮ ನರುಗುಂಪು, ಸುಳಿಯಲಿ ನಿಮ್ಮ ಸುಗಂಧ !
ಬರುತಿಹುದು ಕುಳಿರು ಹಿಂದೆ !
ನಡೆಯಲಿ ನಿಮ್ಮ ವಿಲಾಸ, ಚಿಗುರಲಿ ನಿಮ್ಮ ಮಂದಹಾಸ :
ಮಂಜೆಲ್ಲ ಬಂದು ಮುಸುಕಿ ನಂಜೇರಿ ನೀವು ಬಿದ್ದಾಗ—
ಹೂವಿಲ್ಲ, ಎಲೆಯಿಲ್ಲ, ಚಿಗುರಿಲ್ಲ, ಹೊಗರಿಲ್ಲ—
ನಾಸ್ತಿ ! ನಾಸ್ತಿ ! ನಾಸ್ತಿ !
ಶೂನ್ಯಮಿದಂ ! ಶೂನ್ಯಮಿದಂ ! ಶೂನ್ಯಮಿದಂ !

ಎಲೆಯಿಲ್ಲದ ಟೊಂಗೆಗಳು ಮೊರೆಯಿಡುವವು ಮುಗಿಲಿನೆಡೆಗೆ :
ಬೆಲೆಯಿಲ್ಲದ ಮಂಜಿನ ಮಳೆ,—ಬೀಳುವದಾಗ ಅವುಗಳ ಮೇಲೆ.
ಎತ್ತರವಾಗಿ ನಿಂತ ನಿರ್ಜೀವ ವೃಕ್ಷಗಳಿಗೆ
ಬಿತ್ತರಿಸಿ ಬೀಳುವ ಮಂಜೊಂದೇ ಉತ್ತರ : ಮಂಜೊಂದೇ ಉತ್ತರ !

## ಹಿಮಾಗಮನ

ಮೈಯ್ಯಲ್ಲಿಹ ರಕ್ತವನೆ ಹೆಪ್ಪುಗಟ್ಟಿಸುವಂಥ
ಚಳಿ ಬಂತು, ಜನಜಾತ್ರೆಯೋಡಿಸಿತು, ಕೊನೆಗೊಮ್ಮೆ
ಬರಿದಾದ ಬೀದಿಯಲಿ ನಿಂತ ಹೊಗೆಕೊಡಿಯಲಿ
ಭೌಂವೆಂದು ಬೀಸುತ್ತ ಚಳಿಗಾಳಿಯುದು ಬಂತು,—
ಆಸವುವಾಗಿಹ ಹಿಮದ ಬರುವ ಸಾರಿ !

ಸದ್ದಿಲ್ಲ, ಸುಳಿವಿಲ್ಲ ಮೊಳಗಿನಬ್ಬರವಿಲ್ಲ ;
ಹಿಮಕಣವ ತಡೆಹಿಡಿದ ಗಿಡಗಂಟಿಯುಡಿಗೆರಗಿ
ಹುಳವನರಸುವ ಹಕ್ಕಿಗಳ ದನಿಯೆ ಎದ್ದಿಲ್ಲ :
ಮಸಣವಟ್ಟಿಯನಾಳುವಂತ ಮೌನವ ಹಿಡಿದು
ತೆರಪಿಲ್ಲ, ತಡೆಯಿಲ್ಲ, ಬೀಳುತಿದೆ ಹಿಮವು !

ಮುಗಿಲೆ ಕಳಚಿರುವಂತೆ, ಬೂದಿಬಣ್ಣದ ಮೋಡ
ಉದುರಿ ಹೂವಾದಂತೆ, ದಿಕ್ಕುಗಳ ಕಣ್ಣೆಲ್ಲ
ಬೆಳ್ಳಗಾಗಿರುವಂತೆ ; ವಿಸ್ಮಯವಿದೇನಲವೊ !
ಭಸ್ಮಾಸುರನ ಬೂದಿ ದಿಕ್ಕುಪಾಲೆಂಬಂತೆ
ಉದುರುತಿದೆ, ಚದುರುತಿದೆ ನೋಡು ಹಿಮವು !

ಬೀದಿಯಾಗಿತ್ತಾಗ ಹಿಮಕಣರಣಾಂಗಣವು !
ತಿರುಗುತಿಹ ಕಿಡಕಿರಂದದಿ ಪೊತ್ತೆ, ಬೀಳುತಿವೆ
ಕೋಟಿ ಕಣಗಳು ಕೋಟಿ ಯಟುದ್ಧಗಳನಾಡುತ್ತ
ಬ್ರಹ್ಮಾಂಡವನೆ ವ್ಯಾಪಿಸಿವೆ, ಕೋಪಿಸಿವೆ ನೋಡು
ಭಣಗುಟ್ಟುವಂತೆ ಭೂಮಿ !

ಅಲ್ಲ, ಹಿಮವಲ್ಲವಿದು : ಘನಮಹಿಮನಾ ಮಹಿಮೆ :
ಮುಗಿಲಿನೊಳಗಿಂದುದುರುತಿಹ ಪಾರಿಜಾತಗಳು

ಹಿಮಕಣಗಳಿವು. ನೋಡಿದಲ್ಲೆಲ್ಲ ಧವಲ. ಮನೆ–
ಗಿತ್ತು ಬೆಳ್ಳಿಯ ಹೊದಿಕೆ, ಮರಕೆ ಮಂಜಿನ ಮುಸುಕು,
ನೆಲಕೆ ಬೆಳ್ಳನ್ನ ಮುಡಿಪು !

ಇಲ್ಲಿದ್ದವಾಗ ಹಸಿರೆದ್ದ ಹೊಲಗಳು ; ಈಗ
ತುಂಬಿ ತುಳುಕದ ಬೆಳ್ಳಿ ಬಿದ್ದ ಕೊಳವಾಗಿಹವು !
ಮಾರುದ್ದ ಹಿಮ ಬಿದ್ದು ಮುಚ್ಚಿಹೋಗಿದೆ ದಾರಿ.
ಎಲೆಯುದುರಿ ಕೊಂಬೆ ಮಣಿದಿರುವ ಮರಗಳು ಮಾತ್ರ
ನಿಂತಿಹವು ದೆವ್ವವಾಗಿ !

ಇಂಥ ಹಿಮದಲ್ಲಿ ಸಹ ಹುಡುಗರಿಗೆ ಚೆಂಡಾಟ ;
ಹಿಮದಿಳಿವು ನಿಂತಾಗ ಮತ್ತೆ ರಾತ್ರಿಯು ಬಂದು
ಮೊಡವಿನಿಸಿಲ್ಲದಾ ಮುಗಿಲಟ್ಟದಲಿ ನಿಂದು
ಬಿದ್ದ ಬೆಳ್ಳಿಯ ತೋರಿ ಮಂದ ಮೌನಸ್ಮಿತದಿ
ತಾರೆಗಳನಾಡಿಸುವಳು !

# ಶಿಲಾಕನ್ಯೆ

ಮಂಜು ಬೀಳುವುದೆಂದು
ಬೆದರಿ ನಿಂತ ಕನ್ಯೆ !
ಅಂಜದಿರು, ಮೈಚಳಿಯ ಬಿಟ್ಟು ನಿಲ್ಲು.
ಸುರಿದು ಮುಗಿಲೊಳಗಿಂದ
ಹಿಮವು ಬಿದ್ದಿರಲೇನು ?
ನಿಂತ ನೀರಾದರೇನಾಣೆಕಲ್ಲು !

ನಿನ್ನ ಕೊಳದಲ್ಲಿರುವ
ಕೆಂಪು ಮೀನುಗಳೆಲ್ಲ
ಮಿನುಗದಲೆ ಮುಗಿದಿಹವು ಮಂಜಿನಲ್ಲಿ.
ದಿನದಿನಕೆ ಕಣ್ತೆರೆವ
ನೀರ್ವೂಗಳೆಲ್ಲಿಹವು ?
ಮುಚ್ಚಿಹವು ಹಿಮಕುಂಡದಂಚಿನಲ್ಲಿ.

ದುಂಡುಮಲ್ಲಿಗೆಯಂಥ
ಮೈಯುಳ್ಳ ಕೋಮಲೆಯೆ !
ನಿಂತೆ ತುದಿದಂಡೆಗತಿ ಖಿನ್ನಳಾಗಿ !
ಮಾಗಿಯಲಿ ತುಂಬಿದ್ದ
ಮೊಗಸಿರಿಯು ಕಳೆದಿರಲು
ಯೋಚಿಸುವೆ ನೀನಿಂದು ಭಿನ್ನಳಾಗಿ !

ಬೆದರದಿರು. ಬಂದೀತ–
ದೊಂದು ದಿನ ಮಧುಮಾಸ.
ಮತ್ತೆ ಕರಗೀತಂತೆ ಆಣೆಕಲ್ಲು.
ಹಿಮವಲ್ಲ; ಹಿಮಕರನ
ಹುಣ್ಣಿಮೆಯು ಬೆಳಗೀತು.
ಮೂಡೀತು ಬಣ್ಣ ಬಣ್ಣಗಳ ಬಿಲ್ಲು.

ನಿಂತು ತುದಿದಂಡೆಯಲಿ
ಕೊಳಿದೆದೆಯ ನೆರಳಳಿಯೆ
ಅರಳುವವು ನೀರ್ವೂಗಳೆಲ್ಲ ಮರುಳಿ.
ಧರೆಗೆ ಬೆಳಕಾಗುವದು.
ಕೊಳಕೆ ಹಗಲಾಗುವದು.
ಸುಳಿಯುವವು ಕೆಂಪು ಮೀನುಗಳು ಹೊರಳಿ.

# ಹ್ಯಾಂಪ್‌ಸ್ಟೆಡ್ ಹೀಥ್

ಬಂದೆನಿದೊ ವಸಂತ !
ಬಂತು ಕುಳಿರಿನಂತ !
ಬಂದನೈ ಮಹಂತ
ಇಳೆಯಳುವನು ಕಳೆಯಲು !
ನೋಡಿದೆಂಥ ಬಣ್ಣ !
ಕುಕ್ಕಿಸುವದು ಕಣ್ಣ,
ಹೊನ್ನಾಗಿಸಿ ಮಣ್ಣ
ರನ್ನದಂತೆ ಹೊಳೆಯಲು !

# ಮಾವಿಸ್ಮರ ಕುಸುಮ

(Forget-me-not)

ನೆನಹು–ಹೂಗಳ ನೋಡಿ ತಣಿಯದವರಾರು ?
ಅವುಗಳಾ ಚೆಲುವಿಕೆಗೆ ಮಣಿಯದವರಾರು ?
ಇಂದ್ರನೀಲಗಳಂತೆ ಕಳೆವೆತ್ತು ನಿಂತು,—
ನೋಡ ಬಾ ! ಹೂಗಳಿವು ನಗುತಲಿಹವೆಂತು !
ತಾಯಿ ! ಪ್ರಕೃತಿಯೆ ! ನಿನ್ನ ಬೆಂಡೋಲೆಯೇನು ?
ತಿಳಿಯದಚ್ಚರಿಗೊಳುತ ನೆನೆಯುತಿಹೆ ನಾನು :

ಹಸಿರ ಮುಗಿಲೊಳು ಮೆರೆವ ನೀಲ ತಾರೆಗಳು,—
ಇವಕ್ಕಿಲ್ಲ ಬೆಳತಿಂಗಳೆಳೆವ ಮೇರೆಗಳು !
ಗುಂಪುಗುಂಪಾಗಿಹವು ಸೊಂಪುವಡೆದು
ಲೆಕ್ಕವಿಲ್ಲದಲರಳಿ ದಿಕ್ಕು ಹಿಡಿದು,
ಆಲರಿವಲ್ಲವು ಕಣ್ಣುಕಟ್ಟು, ಕನಸು,
ಸುಗ್ಗಿಯಾ ಹಿರಿಬೆಳಸು, ದಿನದ ನೆನಸು !

ಆಂಗ್ಲಭೂಮಿಯಲಿಂತು ವನವಾಸವಿದ್ದು
ನೇಹಿಗರ ತೊರೆದೊಲವಿನುಪವಾಸ ಬಿದ್ದು
ಎಲ್ಲೆಡೆಗೆ ಸಾರ್ವಭೌಮರ ನೆಲದ ಮೇಲೆ
ಆಳೆಂಬ ತಿಳಿವಿನಂಕುಶ ತಿವಿವ ವೇಳೆ !
ಬೀದಿಹೋಗುವ ನಾಯಿ ಕೂಡ ಬೊಗಳುವುದು
ಎಲ್ಲಿಂದಲೋ ಹಕ್ಕಿ ಕೂಗಿ ತೆಗಳುವುದು.

ಇವನು ಮೇಘಶ್ಯಾಮನೆಂದು ಕೋಪದಲಿ
ಜನರೆಲ್ಲ ಹಳಿಯುತಿರೆ ಶ್ವೇತದ್ವೀಪದಲಿ
ಕೂಸು ಕುನ್ನಿಗಳು ಸಹ ಬೆದರಿ ನೋಡಿ
ವರ್ಣದ್ವೇಷವ ಕಲಿಯೆ ಹಿರಿಯರೊಡನಾಡಿ,—

ಚಳಿಗಾಳಿ ಕೊರೆಯುತಿರೆ ಬಿಸಿಲುಂಡ ಮೆಯ್ಯ,
ಕಾಣದಾ ದೇವನಿಗೆ ಮೇಲೆತ್ತಿ ಕೈಯ್ಯ

ಮೊರೆಯುತಿರೆ, ಮೊಗದೋರಿ ಮುಂದೆ ಬಂದವಿದೊ !
"ಮರೆಯದಿರು ನಮ್ಮನೆಲೊ ! " ಅಂದವೆಂಥದಿದೊ !
"ಚೆಲುವಿಕೆಗೆ ನಮ್ಮ ಬಾಳಿಹುದು ಪಡಿನೆಳಲು ;
ನೇಹಿಗನೆ, ಕೇಳು ! ನಾವೆಲ್ಲ ಬರಿ ಮಳಲು ! "
ನೆನಹು–ಹೂಗಳ ನೋಡಿ ತಣಿಯದವರಾರು ?
ಅವುಗಳಾ ಚೆಲುವಿಕೆಗೆ ಮಣಿಯದವರಾರು?

# ಟೇಮ್ಸ್ ನದಿಯ ಮೇಲೆ ರಾಜಹಂಸ

ನಿರಭ್ರನಭೋಮಂಡಲ ! ಮಧ್ಯರಾತ್ರಿಯಲ್ಲಿ ಸಹ ನೀನು ನಿಚ್ಚಳವಾಗಿ ಕಾಣುವೆಯಲ್ಲ ! ಕುಳಿರನ್ನು ಪಾತಾಳಕಟ್ಟಿದೆ ನೀನು, ತಳಿರೊಡೆದ ನೆಲವನ್ನು ಎವೆಯಿಕ್ಕದೆ ನೋಡಿ ನಿಂತಿರುವೆ ! ಸಾಗರವು ಸಹ ಸಾಗರಬೀಳುವದು....ಈ ನಿನ್ನ ಚೆಲುವನ್ನು ನೋಡಿ ! ಚಿಕ್ಕಮಕ್ಕಳಂತೆ ಸ್ವಚ್ಛಂದವಾಗಿ ತಿರುಗುವವು,— ಹೆಣ್ಣುಗಂಡು ಕೂಡಿ !

ಅಲ್ಲಿ ನೋಡು ! ನಿನ್ನ ಚಿಕ್ಕ ಚಿಕ್ಕವೆಳಕಿನ ಕೆಳಗೆ ಬೆಳ್ಳಿಯ ಮೈ ಮಾಡಿ ಕೊಂಡು ತೇಲುತಿಹುದು ರಾಜಹಂಸ ! ಅಂಜಿಯಿದು ನದಿಯೊಡನೆ ಮುಂಬರಿ ಯುವದು. ಈ ಅರಸಂಚೆಯಂತೆ ನನ್ನಬಾಳ್ವಿಯಿರಲಿ, ತಂದೆ! ಇದರಂತೆನದಿಯು ನನ್ನನ್ನು ತೇಲಿಸಲಿ ! ನಭದ ಹರಕೆಯ ಹೊತ್ತು ಸಾಗಿರಲಿ ನನ್ನ ಸಂಸಾರ !

ಏಕಾಕಿಯಾಗಿ ನಡುಗತ್ತಲೆಯಲ್ಲಿ—ನಡುನದಿಯ ಸೆಳವಿನಲ್ಲಿ—ಚಿಕ್ಕ ಗಳ ಕಿರುವೆಳಕಿನಲ್ಲಿ—ಇನಿಸೊಂದು ಚಿಂತೆಯಿಲ್ಲದೆ ಸಾಗಿವುದಲ್ಲ ರಾಜಹಂಸ ! ಅಹಾ ! ಏನು ಗಾಂಭೀರ್ಯವಿದು ! ಎಂತಹ ಸಹಜ ರಮಣೀಯತೆಯಿದು ! ಇದರ ಕಳೆಯನ್ನು ನನಗೆ ಕರುಣಿಸು, ತಂದೆ ! ಈ ತಿಮಿರಸಮಾಧಿಯ ಸಮಾ ಧಾನವನ್ನು ಕೊಡು ನನಗೆ ! ಜನರಿಲ್ಲದ ರಹದಾರಿಯ ಮೇಲೆ ಏಕಾಕಿಯಾಗಿ ನಡೆದಿಹೆನು ಮುಂದೆ. ದಿಕ್ಕಿಲ್ಲದ ಕತ್ತಲೆಯು ಬಂದು ಮುತ್ತಿಹುದು ನನ್ನ. ಹೃದಯವಿದು ಕಳವಳಿಸುವದು.

ಅರಸಂಚೆಗೆ ನದಿಯೇ ರಹದಾರಿ ; ನನಗೆ ರಹದಾರಿಯೇ ನದಿ. ಅಮರತೆ ವೆತ್ತ ಕಂಗಳು ನಮ್ಮನ್ನು ದಿಟ್ಟಿಸಿ ನೋಡುತಿವೆಯಲ್ಲ ! ಆದರೆ ಅರಸಂಚೆಯ ಪುಣ್ಯ ಸಂಚಯವಿಲ್ಲ ನನಗೆ. ಆ ದಿವ್ಯಶಾಂತಿಯಿಲ್ಲ ನನಗೆ. ಅದನ್ನೊಂದು ಕರುಣಿಸು ತಂದೆ ! ಆಗ ಕಾಲೆತ್ತಿ ನಡೆಯುವುದಿಲ್ಲ ನಾನು.—ನೀರು ಹರಿದತ್ತ ರೆಕ್ಕೆಯನು ಮುಚ್ಚಿ ತೇಲುವೆನು ! ಕಂಡದ್ದೇ ಗುರಿ ; ಉಂಡದ್ದೇ ಅಮೃತ ; ಅರಸಂಚೆಯಾಗುವೆನು ನಾನು !

ಶೇಕ್ಸ್‌ಪಿಯರ್ ಮಹಾಕವಿಯು ಏವನ್ ನದಿಯ ರಾಜಹಂಸವಂತೆ. ಅವನ ಕಾವ್ಯಗಳನೋದಿ ಕೊನೆಯಿಲ್ಲದ ದುಃಖವನ್ನರಿತೆ ನಾನು. ಟೇಮ್ಸ್ ನದಿಯ ಅರಸಂಚೆಯಿದು,—ಮಧ್ಯರಾತ್ರಿಯಲ್ಲಿ ಬೆಳ್ಳಿಬೆಳ್ಳಿಯಾಗಿ ಹೊನಲಂತೆ ಸಾಗಿಹುದು ; ಇದನ್ನು ನೋಡಿ ಶಾಂತಿಪಾಠವನ್ನು ಕಲಿತೆ ನಾನು !

# ಡಾರ್ಟ್‌ಮೂರಿನ ಪರ್ವತಾವಳಿಯ ಬಳಿ

ಎಣೆಯಿಲ್ಲದೀ ಸೊಬಗ
ನೋಡಿ ಸಂತಸಗೊಂಡು
ಸವಿಯಿದನು ಹಾಡಬೇಕೆಂದುಲಿವ ಜೀವ !
ಆನಂದದಾ ಮುಕುಟ
ಮೌನವೆಂಬುದನರಿದು
ನಿಗ್ರಹಿಸು, ನುಡಿಯದಿರು ನುಡಿಗೂಳಿಯಾಗಿ.

ನೀನು ಕಂಡಿಹ ಚೆಲುವ
ಕೋಟಿ ಕಣ್ಗಳು ಕಂಡು
ಮರೆಯಾಗುವವು ನಿನ್ನ ಕಣ್ಣಿನಂತೆ,
ಕಾಣಿಸಿಹ ಚೆಲುವು ತಾ
ಮರುಚಣಕೆ ಮಾರ್ಪಟ್ಟು
ಬಯಲಾಗುವದು ಕಳೆದ ಮಾಗಿಯಂತೆ.

# ಪ್ಯಾನ್ಸಿ

ಪ್ಯಾನ್ಸಿಯೊಂದು ಸಣ್ಣ ಹೂವು,
ಅದಕೆ ಹಳದಿ ನೀಲಿ ಬಣ್ಣ,
ಕಣ್ಣಿಗೆಂಥ ಹಬ್ಬವಾಗಿ
ಮೆರೆಯುತಿಹುದು ನೋಡು ! ಅಣ್ಣ !
ಎಂಥ ಆನಂದವು
ದೇವನಿತ್ತ ಚಂದವು.
ಒಂದು ಹೂವಿನಲ್ಲಿ ಚೆಲುವ—
ನಿಂತು ತುಂಬಿದಂಥನಂತ
ನಂದನದಲ್ಲೆಂಥ ಸೊಬಗ—
ನಿರಿಸಿದನದರಾದಿಯಂತ
ಹೊಳೆಯುಬಹುದು ನೋಡಲು
ಹೂ-ಹುಡಿಯೊಡನಾಡಲು.
ಮಳೆಬಿಲ್ಲದು ಮುಗಿಲೊಳೆಲ್ಲ
ಬಣ್ಣಬಣ್ಣವಾಗಿ ಮೂಡಿ
ಸಣ್ಣ ಹೂವನೊಂದ ಕಂಡು
ಒಲುಮೆಗಣ್ಣಿನಿಂದ ನೋಡಿ
ಅದಕೆ ಧಾರೆಯೆರೆದಿತು
ತನ್ನ ಸಿರಿಯ ಕರೆಯಿತು.
ದೇವನಿತ್ತ ವೈಭವವದು,—
ಅವನ ಚಿತ್ರಿಸಿರುವ ಕಲೆ.
ಮುದ್ದಾಗಿಸಿತೊಲುಮೆಯದನು
ಮುದ್ದಿಸುತ್ತ ಮೊಗದ ಮೇಲೆ ;
ಹೊಂದಿಸುವ ನಿಮಿತ್ತವು
ಅವನ ದಿವ್ಯಚಿತ್ತವು.

ಎಡಿಥ್ ಟೆನ್‌ಬ್ರಿಂಕ್

# ಕಮ್ನೂರ್ ದಿನ್ನೆಯ ಕೊನ್ನಾರ

ಇಂದಿನೀ ಸಂಜೆಯಲಿ ಕಮನೂರ ದಿನ್ನೆಯಾ
ಕೊನ್ನಾರದಲಿ ನಿಂತು ನಿನ್ನ ಕರೆಯುವೆನೀಗ.
ಬನ್ನಕ್ಕೆ ಬಾಯಿಲ್ಲ ! ಮೂಕ ಕರೆಯಾಲಿಸುತ
ನೂಕಿ ಬಾರಿತ್ತ ಮುನ್ನೀರ ದೊರೆಯೆ !

ಹಿಂದೊಬ್ಬ ಕವಿಯಿಲ್ಲಿ ಆಂದದಾಟವ ಕಂಡು
ಮನವಂದ ಗೆಳೆಯನೊಡನಾಡಿ ಕಾಲವ ಕಳೆದ.
ಇಂದೊಬ್ಬ ಕವಿ ತನ್ನ ನೇಹದವರನು ತೊರೆದು
ಮೋಹವಶನಾಗಿ ಕರಕರೆಯ ಪಡುತಿಹನು !

ಇಲ್ಲಿದ್ದ ಕನ್ನೆಯೋರ್ವಳಿಗೊಲಿದ ಧಣಿಯೊಬ್ಬ
ಮದುವೆಯಾಗುವೆನೆಂದು ನುಡಿಯಿತ್ತು ಕರೆದೊಯ್ದು
ರಾಣಿಯೊರ್ವಳ ತೋಷಕಾಗಿ ತೂರಿದನವಳ.
ಬಾರದಿರಲೀ ದೈವ ನನ್ನಸುವಿಗೊಡೆಯ !

ಹಾಡುತಿವೆ ಹಕ್ಕಿಗಳು,—ನಾನು ತಿಳಿಯದ ಭಾಷೆ !
ಅರಳಿಹವು ಬಗೆಬಗೆಯ ಹೂವಿಲ್ಲಿ ಬೈಗಿನಲಿ.
ನರಳುತಿಹೆ, ತಾಯ್ನಾಡೆ ! ನಿನ್ನ ದರುಶನಕಾಗಿ
ಚರಣಕಮಲದಿ ಹರಣ ಲೀನವಾಗಿ.

ಹಿಂಡನಗಲಿದ ಹರಿಣ, ಹೆಣ್ಣನಗಲಿದ ಗಂಡು,
ಒಂದೆದೆಯನೆರಡಾಗಿಸುತ್ತ ಬಿಸುಡಿದ ನಲುಮೆ,
ಮೇಲ್ವರಿದು ಬಲುಮೆಗಳು ಗಾಸಿಗೊಳಿಸಿದ ಜೀವ,—
ಒಂದಲ್ಲ ಎರಡಲ್ಲ. ನೂರಿರಿತ ದೊರೆಯೆ !
ಇದೊ ! ಬಿದಿಗೆ ಚಂದಿರನು ನಿಂತ ಮುಗಿಲಿನ ತುದಿಗೆ
ಕೊನ್ನಾರದಲಿ ನಿಂತು ನೋಡುತಿಹೆನೆಡಬಲಕೆ.
ನನ್ನ ಬಯಕೆಯು ಹಣ್ಣು ಚಂದ್ರನಂತೆಯೆ ಬೆಳೆದು
ಮಾಗಿ-ಹುಣ್ಣಿಮೆಯಾಗಿ ಸಾಗಿಬರಲಿನ್ನು.

# ವರ್ಡ್ಸ್‌ವರ್ಥನ ಸಮಾಧಿಸ್ಥಾನ

ಇಲ್ಲಿ ಕವಿಯು ದೃಷ್ಟಿಯರಳಿ
ಮಾಗಿತವನ ಜೀವವು.
ಇಲ್ಲಿ ಕೊಳದ ಬಳಿಗೆ ಬರಲು
ಕೊನರಿತವನ ಭಾವವು.
ಗಿರಿಕಂದರರದೀ ಸುಂದರ ಸೀಮೆಯನ್ನೆ ತುಂಬಿತು
ಕವಿಯ ಪ್ರತಿಭೆ, ಪ್ರಕೃತಿದೇವಿಯೊಲವನೊಂದೆ ತುಂಬಿತು.
ರವಿಯ ದಿನದ ಬೆಳಗು–ಮುಳುಗು
ಜಲಪಾತದ ಹಿರಿಯ ಮೊಳಗು
ಮಳೆಬಿಲ್ಲಿನ ಮಣಿತವು
ಎಳೆಹುಲ್ಲಿನ ಕುಣಿತವು
ಕುಕೂ ಎಂದು ಕರೆವ ಹಕ್ಕಿ,
ದೂರ ಮಿನುಗುತಿರುವ ಚಿಕ್ಕಿ
ತಾನು ತೇಲಿ ತನ್ನ ನೆಳಲ
ತೇಲಿಸಿರುವ ಹಂಸದಮಲ
ಶೋಭೆಗೆಲ್ಲ ಹರುಷಗೊಂಡು ಪಕ್ಕ ಬಲಿತು ಹಾರಿತು :
ಕವಿಯೇ ! ನಿನ್ನ ಭಾವ ನಭೋಮಂಡಲವನೆ ಮೀರಿತು.

ಇಲ್ಲಿ ನಿಂತು ನೋಡೆ ಮುಗಿಲು
ಸಾಲುಗೊಂಡು ರಾತ್ರಿ ಹಗಲು
ಅಲೆಯುತಲೆಯುತಲೆಯುತಿರುವವು
ಮತ್ತೆ
ಗ್ರಾಸ್‌ಮಿಯರ ಶೃಂಗದೊಡನೆ ಮಲೆಯುತಿರುವವು.
ಹಚ್ಚ ಹಸಿರು ಕೆಳಗೆ ಮೇಲೆ
ಕುರಿಹಿಂಡಿವು ಸಾಲುಸಾಲೆ
ಮೇಯುಮೇಯುಮೆಯುತಿರುವವು.

ಮೋದು
ಲಾಂಗ್ ಡೇಲದೆಡೆಗೆ ದಾರಿ ಕಾಯುತಿರುವವು.

ನೋಡು ! ಬಣ್ಣಬಣ್ಣದರಳು
ಪ್ರಕೃತಿದೇವಿಯಿಟ್ಟ ಹರಳು :
ನೆನಹು ಹೂವು, ಡ್ಯಾಫೊಡಿಲ್ಲು,
ನರಿಕುಲಾಯಿ,—ನೋಡಿದಲ್ಲು !
ಶೋಭಿಸಿರಲು ರಾಯಡಲ್ಲ ತುಂಗಶೃಂಗವು,—
ಸವಿದಿತದನು ಕಮಲದಂತೆ ಜೀವಭೃಂಗವು !

ಫಲಿಸಿತಿಲ್ಲಿ ಆ ಸಮಾಧಿ :
ಅದಕೆ ದಿವ್ಯ ಸ್ಥಾನವಿದು !
ತಿಳಿಯಿತಿಹದ ಅಂತ್ಯ, ಆದಿ !
ಎಂಥ ಹಿರಿಯ ಮೌನವಿದು !
ಓ ! ಕವಿಸಮ್ರಾಟ ! ತಿಳಿದೆ ನಿನ್ನ ಪ್ರತಿಭೆಯಾಟಪಾಟ
ಜರುಗಿತಿಲ್ಲಿ,—ಇಲ್ಲಿ ತುಂಬಿ ಬಂತು ನಿನ್ನ ದಿವ್ಯ ನೋಟ !
ಗ್ರಾಸ್‌ಮಿಯರ ಕೊಳದ ಬಳಿಗೆ ನಿಂತು ಕುರಿತೆನು :
ಪ್ರಕೃತಿ–ಪುರುಷರಮರಲೀಲೆಯೆಲ್ಲವರಿತೆನು !

# ಬಡಗಣದ ಬೆಳಕು

ಕಾಮನ ಬಿಲ್ಲಿನ ಬೆಳಕನು ಮುಗಿಲೊಳೆಲ್ಲ ಚೆಲ್ಲಿ
ಸೃಷ್ಟಿಯನು ವಿಚಿತ್ರಮಯವಾಗಿಸಿದೆ ನೋಡು
ಬಡಗಣದ ಬೆಳಕು !

ಉತ್ತರಧ್ರುವದಿಂದ ಪುಟಿದ ಬೆಳಕಿನ ಕಾರಂಜಿಯೊಂದು
ಕೆಂಬೆಳಕಿನ ಮಾಯೆಯನು ಕಟ್ಟಿ
ಅಗಲವಾಗಿ ಮುಗಿಲಲ್ಲಿ ಹರಿದಿದೆ ನೋಡು !

ಬೆಳಗಿನ ಬೆಳ್ಳಿಯಂತೆ, ಸಂಜೆಯ ರಂಜನೆಯಂತೆ
ಅಧ್ರುವವಲ್ಲ ನೋಡು !
ಮುಗಿಲಲ್ಲಿ ಬೇಗೆ ಹಬ್ಬಿದಂತೆ
ಕಣಿವಿಯಲ್ಲಿರುವ ಬಣಿವಿಗಳೆಲ್ಲ ಸುಟ್ಟಂತೆ,
ಮುಗಿಲೇ ಅಚಲವಾಗಿ ಭುಗಿಲ್ಲೆಂದಂತೆ,—
ಮೇಲಿನಲಾಬಿ ಸೋಗಿನ ಗುಲಾಬಿ ಬಣ್ಣವಿದು
ಸನಾತನವಾಗಿ ಬಿದ್ದುಕೊಂಡಿದೆ ನೋಡು !

ಸೂರ್ಯನ ಮೇಲೆ ಕಲೆಗಳೆದ್ದಾಗ
ಬಡಗಣದ ಬೆಳಕು ಅಲೆಅಲೆಯಾಗೇಳುವದು !
ವಿದ್ಯುತ್ತಂತಿ, ವಿದ್ಯುದ್ದೀಪ, ವಿದ್ಯುದೆಂಜಿನು,—
ಬಂದಾಗಿವೆ ತಂತೋತಂತು ಥಕ್ಕನೆ ನಂದಿವೆಯೆಲ್ಲ !
ಇದ್ದ ಬಿದ್ದ ಗವಿಗಳಲ್ಲಿ ಮೊಗವೆತ್ತಿದೆ ದುಡಿವಾಳ್ಗಳಿಗೆ
ಸೃಷ್ಟಿಯ ಸೊಬಗ ನೋಡಲೆನೆ
ರಜೆಕೊಟ್ಟು ಕಂಗಳ ಕೊಡುವಂತಹದಿದು,—
ಬಡಗಣದ ಬೆಳಕು !

## ಇಡಿಕಮ್ ಜಾತ್ರೆ

ಇಡಿಕೆಮ್ಮ್ಂಬೂರಿಗೆ ಹೆಸರ್ಹ್ಯಾಂಗ ಬಂತು ?
ಚೌಡಿಯ ಲಿಪಿಗಲ್ಲ ಕೇಳಣ್ಣ ಕೋಲ.
ಮಲ್ಲಾಡದಡವಿಯ ಮಧ್ಯದಿ ನಿಂತು
ಘಟ್ಟದ ಕೆಳಗೂ ಮೆರೆದೂರ ಕೋಲ.

'ಹೇಳ್ ತಮ್ಮ ಏ ಪೀರ ಎಲ್ಲ್ಯತಿ ನಿನ ತಟ್ಟು
ಇಡಿಕಮ್ಮೂರ ಜಾತ್ರೆಗೆ ಹೋಕ್ಕೇವಿ ಕೋಲ.
ಬಸವಣ್ಣ, ಸತ್ತೆಪ್ಪ, ಗೂರಣ್ಣ, ದವನಪ್ಪ,
ದೊಡ್ಡಪ್ಪ, ಸಣ್ಣಪ್ಪ,—ಎಲ್ಲಾರು ಕೋಲ.'

ಪೀರೆಂದ : 'ಹೊಳ್ಳೆಂದು ಬಿಳಿಗುದುರಿ ತರತೀದಿ?'
'ಶುಕ್ರಾರ ಶಣಿವಾರ ತರತೀನಿ ಕೋಲ.'
ಶುಕ್ರಾರ ಬಂದ್ಹೋತು ಶನಿವಾರ ನಡುಹೊತ್ತು :
ಮುದಿಗುದುರಿ ಮನಿಗೇನು ಬರಲಿಲ್ಲ ಕೋಲ.

ಘಟ್ಟದ ಕೋಡೇರಿ ಪೀರಣ್ಣ ನೋಡಿದ
ತಟ್ಟು ಬಿದ್ದಿತ್ತರೆಗಣ್ಣಾಗಿ ಕೋಲ.
ತಟ್ಟನೆ ಗೊಣ್‌ಚೆಲ್ಲಿ ಪ್ರಾಣವ ಬಿಟ್ಟಿತು
ಹಾಡಿಕೊಂಡತ್ತಾನ ಪೀರಣ್ಣ ಕೋಲ.

ಕಲ್ಲಮೇಲ್ಕೂತ್ಕೊಂಡು ಹಾಡಿಕೊಂಡತ್ತಾನ.
ಕುದುರಿ ಸತ್ತರು ಕತೆ ಮುಗಿದಿಲ್ಲ ಕೋಲ
ಸತ್ತರು ಅದ ಹತ್ತಿ ಹೋದವರೆಲ್ಲಾರು
ತಟ್ಟುವಿನಡ್ಡಾಟ ಮುಗಿದಿಲ್ಲ ಕೋಲ.

ರಾತ್ರೆಲ್ಲ ಚಳಿಗಾಳಿ ಬೈಲಾಗ ರೊಂಯ್ಗುಟ್ಟಿ
ಜಾತ್ರಿಯು ಕರೆದಾಗ ಸಿಳ್ಳಾಕಿ ಕೋಲ
ಪೀರನ ಕುದುರೀ ತಪ್ಪದೆ ಬಂದೂ
ಕೊನ್ನಾರದಡಿಗುಂಟ ಬೂದಿ-ವ್ಯೆ, ಕೋಲ.

ರಾತ್ರೆಲ್ಲಾ ರಂಬಾಟ ರಾತ್ರೆಲ್ಲಾ ನರಳಾಟ
ರಾತ್ರೆಲ್ಲಾ ಬೊಬ್ಬಾಟ ಬಯಲಾಟ ಕೋಲ.
ಜಾತ್ರಿಗೆಂದೂರೆಲ್ಲಾ ಹತ್ತಿಕೊಂಡ್ಹೋಗಿದ್ದ
ಪೀರನ ತಟ್ಟುವಿನೆಲುಬಿನ ಕೋಲ !

# ವಿಚಿತ್ರ

ಇಲ್ಲಿ ಸಾಮ್ರಾಜ್ಯವಿತ್ತು, ಸಕಲ ಸಂಪತ್ತಿತ್ತು,
ಕುಬೇರನ ಖಜಾನೆಯಿತ್ತು !
ಇಂದಿಗೆ ಭಾರತೀಯರಿಗೆ ತಿನ್ನಲು ಕೂಳಿಲ್ಲ ;
ಕುಡಿಯಲು ನೀರಿಲ್ಲ !
ಇದೊಂದು ಪರಮ ವಿಚಿತ್ರ !

ವಿಲಾಯತಿಯಲ್ಲಿ ಗಡ್ಡೆಗೆಣಸಿತ್ತು,
ಅರೆದು ತಿನ್ನಲು ಮೆಣಸಿರಲಿಲ್ಲ ;
ಇಂದಿಗೆ ಸಕಲ ಸಂಪತ್ತು ಸುರಿದಿಹುದಲ್ಲಿ,
ಸೃಷ್ಟಿಯ ಕೊಳುವ ಕುಬೇರರಲ್ಲಿ !
ಇದೊಂದು ಪರಮ ವಿಚಿತ್ರ !

ತಾಯ್ನಾಡಿನಲ್ಲಿ ಕೋಟ್ಯಾನುಕೋಟಿ ಜನರು,—
ಆದರೆ ದಾಸಾನುದಾಸರಿಹರು !
ಬ್ರಿಟನ್ನಿನಲ್ಲಿ ಕೆಲವು ಲಕ್ಷ ಜನರು—
ಆದರೆ ಸಮ್ರಾಟರಿಹರು !
ಇದೊಂದು ಪರಮ ವಿಚಿತ್ರ !

ಭಾರತದಲ್ಲಿಲ್ಲದ್ದು ವಿಶ್ವದಲ್ಲಿಯೇ ಇಲ್ಲ—
ಲಕ್ಷ್ಮೀಸರಸ್ವತಿಯರ ತವರ್ಮನೆಯದು !
ತಕ್ಕಡಿ ಹಿಡಿದು ತಲೆದೂಗುತ್ತ
ಬ್ರಿಟನ್ನರು ಬರುತಿದ್ದರಲ್ಲಿ.
ಇಂದು ಬ್ರಿಟನ್ನಿಗೆ ನಡೆದಿಹರು ಜೊತೆಗಾರರು,—
ಹಿಡಿ ಹೊನ್ನಾಸೆಗೆ.
ನಡೆದಿಹೆನು ನಾನು,—ವಿದ್ಯೆ ಪಡೆಯಲೆಂದು !
ಇದೊಂದು ಪರಮ ವಿಚಿತ್ರ !

# ಶರ್ವುಡ್

[ಸ್ಪೇನದಲ್ಲಿ ಸರಕಾರದ ಪಕ್ಷವನ್ನು ಹಿಡಿದು
ಯುದ್ಧ ಮಾಡುತ್ತಿದ್ದ ಅಂತರ್‌ರಾಷ್ಟ್ರೀಯ ಸೈನ್ಯ
ವನ್ನು ಸೇರಿದ್ದ—ನನ್ನ ಸಹಾಧ್ಯಾಯಿಯಾದ—
ಬಿಲ್ ಶರ್ವುಡ್ಡನನ್ನು ಕುರಿತು :]

ಬಿಟ್ಟ ಬಾಣದಂತೆ, ಬಿಲ್ಲ ! ನೆಟ್ಟಗಿಳಿದೆ ಸ್ಪೇನಕೆ ;
ತಡೆಯಲಿಲ್ಲ ಗೆಳೆಯ ! ನಿನ್ನ, ಸೋಫಿ, ರಂಭೆ, ಮೇನಕೆ !
ನಲ್ಲಳಾನಂದದಿಂದ 'ಬಿಲ್ಲ ! ಹೋಗು !' ಎಂದಳು ;
'ಕಾಯುತಿರುವೆ ನಿನ್ನ ಗೆಲುವ'ನೆಂಬ ಸೊಲ್ಲ ತಂದಳು.

ಎಳೆಯನಿರಲು ಸಮತೆಗೆಂದು ಮಾರಿಕೊಂಡ ಜೀವವು,
ಗೆಳತಿಯೊಡನೆ ಸಮರಸವನು ಕಂಡುಕೊಂಡ ಭಾವವು,
ಇನಿಯಳಲ್ಲಿ ಕೂಡ ಸಮತೆ ನೆಲೆಸಿತೆಂಬ ಹೇವವು,—
ಯೋದ್ಧ ! ವಿಜಯಿಯಾಗು ! ನಿನ್ನದೆಲ್ಲವಿರಲಿ ಕ್ಷೇಮವು.

'ಸರ್ವಾರ್ಪಣ ಸತ್ಯ'ಕೆಂದೆ : ಅಹುದಹುದೆದೆಗಾರಿಕೆ !
ಧನ್ಯಳಹುದು ನಿನ್ನ ನಾಡದೇವಿ : ಆ ಅಮೇರಿಕೆ !
ಇನ್ನೆಂದಿಗೆ, ಗೆಳೆಯ ! ನನ್ನ ನಿನ್ನ ಒಟ್ಟು ಸೇರಿಕೆ ?
ಕ್ಷೇಮವಿರಲಿ ನಿನ್ನದೆಲ್ಲವೆಂಬುದೊಂದೆ ಕೋರಿಕೆ !

# ದ್ವಂದ್ವಯುದ್ಧ

ದ್ವಂದ್ವಯುದ್ಧದ ಜಗವಿದು,—ಇಬ್ಬರು ಜಟ್ಟಿಗಳು ಕೂಡಿ
ಒಬ್ಬರೊಬ್ಬರ ಸಾವಿಗಾಗಿ ಸಮರದಲ್ಲಿ ಹೋರಾಡುತಿಹರು.
ಗೆದ್ದವನೇ ಎದ್ದ. ಬಿದ್ದವನೇ ಬಿದ್ದ.
ಗೆದ್ದವನ ಕುಲಕೋಟಿಯೆಲ್ಲ ಉದ್ಧಾರವಾಯ್ತು.
ಬಿದ್ದವನಿಗೆ ಇದ್ದುಬಿದ್ದವರು,—ಗತಿಗೆಟ್ಟರು ಇದ್ದು ಬಿದ್ದಲ್ಲಿ.
ಇಬ್ಬರ ಸೋಲು-ಗೆಲವು ತೂಗುವವು ಮೂಲೋಕದ ದೈವವನ್ನು.
ಜಟ್ಟಿಗಳು ಮಾನವರಲ್ಲ,—ಪ್ರಮೇಯಗಳೆರಡು, ಎರಡು ತತ್ವಗಳು !
ಹದ್ದನ್ನು ಹದ್ದು ಕಾದಿದಂತೆ ಬೆನ್ನಟ್ಟುವವು ವಾಯುಲೋಕದಲ್ಲಿ.
ಹೋರಾಡುವವು ವಾರಿಧಿಯಲ್ಲಿ,—ತಿಮಿಂಗಿಲವು ತಿಮಿಂಗಿಲದೊಡನೆಯಂತೆ.
ಈ ಕಲ್ಪನೆಗಳ ಕಾದಾಟಕ್ಕೆ ಕಂಪಿಸಿತ್ತು ಜಗವೆಲ್ಲ ;
ರಕ್ತದ ಕಾಲುವೆ ಹರಿಯಿತು ; ಕೋಟಿನಾರಿಯರ ಕುಂಕುಮವಳಿಸಿತು ;
ಆದರೆ ಮುಗಿದಿಲ್ಲ ತತ್ವಗಳ ತುಮುಲ ಯುದ್ಧ !

ಕಲ್ಪನೆಗಳಾವವು ಗೊತ್ತೆ ?
ಇದ್ದುದೇ ಇರಬೇಕೆಂಬ ಗೊಂದಲ, ಹೊಸದೊಂದು ಬರಬೇಕೆಂಬ ಹಂಬಲ ;
ಶ್ರೀಮಂತರದಿರಬೇಕೆಂಬ ಕಸಿವು, ಶ್ರೀಮಂತರು ಸಾಯಬೇಕೆಂಬ ಹಸಿವು
ಸಾಮ್ರಾಜ್ಯದ ಮುಬ್ಬು, ಸ್ವಾತಂತ್ರ್ಯದ ಉಬ್ಬು ;
ಬಿಳಿದೊಗಲಿನ ಕುಣಿತಕ್ಕೆ ಕರಿದೊಗಲು ಮಣಿದಿರಬೇಕೆಂಬಾಸೆ,
ಕರಿಬಿಳಿದರ ಭೇದವನಳಿಸಿಬಿಡಬೇಕೆಂಬ ಭಾಷೆ ;
ಉಳಿದವರ ಸುಖವೆಲ್ಲ ನನ್ನ ಸುಖಕ್ಕೆ ಬರಿ ಸವುದೆಯೆಂಬ ಭಾವ,
ವಿಶ್ವದ ಸುಖವೇ ವ್ಯಕ್ತಿಯ ಸುಖವೆನಿಸಬೇಕೆಂಬ ಹೇವ ;
ಬಡವರ ಬಾಳ್ವೆಯನ್ನು ಹಿಂಡಿ ಹಿಪ್ಪೆಯಾಗಿಸುವ ನೀತಿ,
ಹಣವಿದ್ದವರ ಹೆಣ ಕೆಡವಬೇಕೆಂಬ ರೀತಿ,—
ಉಯ್ಯಾಲೆಯಾಡುವದು ಜಗತ್ತು, ಶಕ್ತಿಗಳೆರಡು ಜೀಕುವಲ್ಲಿ ;
ಸ್ನೇಹತಂತುಗಳು ಹರಿದವು, ಮಣಿಯು ಕಳಚಿ ಬಿತ್ತು ;
ಉರುಳಿ ಬೀಳುವದೆ ಮರವು ? ಹೊರಳಿ ಹೋಗುವದೆ ಜಗತ್ತು ?

# ಎಡಿನ್‌ಬರೋ ಕೋಟೆಯ ತುದಿಗೆ ನಿಂತು

೧

ಮನುಕುಲದ ಕಣ್ಣೀರ ಮಡುವಿಗಿಹ ನಡುಸುಳಿಯ
ನಟ್ಟನಡುವೆಯೆ ನಿಂತು ಒರೆಯುತಿಹೆನೀ ಮಾತ.
ಎದೆ ಬೆಂದು ಬೇಯಿಸಲು,—ಓದುಗನೆ ಮುನಿಯದಿರು.
ಸಟೆಯಲ್ಲ, ಕನಸಲ್ಲ ನರನ ರಕ್ಕಸತನವು.

ಇಲ್ಲಿಯೀ ಕೋಟೆಕೊತ್ತಳವ ಕಟ್ಟು ಮುನ್ನ–
ಇತ್ತೊಂದು ಬೆಟ್ಟವಿದು. ವನಚರರು ಬಾಳಿದರ–
ದೆನಿತೊ ವರ್ಷಗಳಲ್ಲಿ—ದ್ರೂಯಿಡರು, ಬ್ರೀತನರು–
ಕಲ್ಲಿನಾಯುಧಗಳನೆ ಝಳಪಿಸುತ ಹೋರಿದರು,
ಮೈಗಳನು ನೀಲಿ ಹಚ್ಚೆಗಳಿಂದ ಚುಚ್ಚಿದರು,
ಕೂಡಿ ಹೊಡೆದಾಡಿದರು, ಕಾಡಿದರು ಮಡಿದರು.
ಮುಂದೆ ಬೆಟ್ಟವ ಸುತ್ತಿ ನಿತ್ಯ ಪ್ರವಹಿಸುತಿರುವ
ಕಾಲಕಾಳ್ಪುರದೆ ನೀರೆಲ್ಲ ಕಣ್ಸವಿಗೊಂಡು
ರೋಮದಾ ಟೈಗ್ರಿಸದ ಸಂಗಮವ ಕೋರಿತ್ತು.

ನೋಡಿದೆನು ರೋಮರಾಜ್ಯದ ಶಿಲಾಶಾಸನದ
ಮುರಿಗಳನು, ಹಾಳಾದ ನಿರ್ಜರರ ಮೂರ್ತಿಗಳ,
ಒದೆಯುನನುಯಶಾಯಿಯನು ಬಂಧಿಸಿದ ಮೋಡಿಯನು :—
ರಕ್ತ ಕುದಿಯಿತು ರೋಮರೋಮದಲಿ ನವಿರೆದ್ದು
ಬಡವರನು ಬಲ್ಲಿದರು ಕೆರಳಿದುದ ಕೇಳ್ದೊಡನೆ :
ಅದಕಂತೆ ರೋಮವಾಗಿಹುದು ಕಾಲನ ಹೋಮ.

೨

ಕಳೆಯಿತು ಶಿಲಾಯುಗವು. ಕಳೆದವೈ ರೋಮಯುಗ–
ದನ್ಯಾಯ ನ್ಯಾಯಗಳು. ಬೇರೊಂದು ಯುಗ ಬಂತು

ಜಗವನ್ನು ಬದಲಿಸುವ ಪಣ ತೊಟ್ಟು. ಮಧ್ಯಯುಗ
ತೋರಿತ್ತು ತ್ರಿಮುಖಗಳ. ಧರ್ಮವದಕೊಂದು ಮುಖ,
ಪ್ರೇಮವಿನ್ನೊಂದಹುದು ; ಯುದ್ಧಶ್ರೀ ಮಗುದೊಂದು.
ಧರ್ಮವಿದು : ಗುರುವೊಬ್ಬ ಕುರುಬನವ,—ಮಂದಿ ಕುರಿ ;
ಓದಿಲ್ಲ, ತಿಳಿವಿಲ್ಲ ಕುರುಡು ನಂಬಿಕೆಯುಳಿದು.
ಪ್ರೀತಿಯ ವಿಚಿತ್ರರೀತಿಯ ನೋಡಲೆಳಸುವಿಯ ?
ಬಾರಿಲ್ಲಿ ಮೇರಿರಾಣಿಯ ಶಯನಮಂದಿರಕೆ.
ಇದು ಮಂಚವವಳದಿದು ಹಾಸಿಗೆಯು. ಮತ್ತಿಲ್ಲಿ.
ಪವಡಿಸಿದಳವಳು ಕಾದಲನೊಡನೆ, ಪತಿಯೊಡನೆ ;
ಋತುವಿಗೊಬ್ಬೊಬ್ಬ ನಾಯಕನೊಡನೆ ರತಿಸಿದಳು.
ಗತಿಸಿದಳು ನಿರ್ಗತಿಕೆಯಾಗಿ ಕೊನೆಗಾಲದಲಿ
ದಯೆ, ಮಾಯೆ, ಸೌಂದರ್ಯವಿಲ್ಲದೆಲಿಝಬೆತ್‌ರಾಣಿ
ರತಿಗೆ ಪ್ರತಿರತಿಯಾದ ಮೇರಿಯನು ಕೊಲ್ಲಿಸಲು.

ಕಾಳಗಂಗೊಡುವವರ ಕಂಟಮಟ ಹೊಗುಳುವಿಯ ?
ನೋಡುತಾಯುಧಶಾಲೆಯನು ನಿಂತಿರೊಂದು ಕ್ಷಣ :
ನೂರು ಚಿರ್ಚಿನ ಕ್ರೌರ್ಯಗಳನು ಮೀರುವ ಬರ್ಚಿ,
ಏಳುಮೆಟ್ಟಿನ ಹುಲಿಯನಂಜಿಸುವ ಹುಲಿಯುಗುರು,
ಸೋಂಕಿ ಕೊಲುವ ಕುಠಾರ, ನೂಂಕಿ ನಲಿವ ಕಠಾರಿ.
ತ್ರಿಶೂಲ, ರಣಗೊಡಲಿ, ರತ್ನರಂಜಿತ ಖಡ್ಗ,
ಕಣ್ಣಾಲಿಯಲಿ ಕಾಂಬ ಗೊಂಬೆಯೆದೆಯನೆ ಸೀಳಿ
ಸರಿವಂಥ ಮೊನೆಯೀಟಿ, ತೋಫು, ಗುಂಡು, ಗುರಾಣಿ,—
ಮಧ್ಯಯುಗದೆದೆಯ ಪಾಷಾಣತೆಯ ಕುರುಹುಗಳು
ನೋಡಿದೋರಂತೆ ನಿಂತಿವೆ ಸಂಗ್ರಹಾಲಯದಿ :
ಯುಗಗಳೆಂಬೀ ಮೃಗಗಳನು ಬೇಟೆಯಾಡುತ್ತ
ಕಾಲಪುರುಷನು ತನ್ನ ಕಟ್ಟಡದ ಕೈಸಾಲೆ-
ಯಲ್ಲಿ ತಂದಿರಿಸಿದೊಲು ದಂಷ್ಟ್ರದೊವಲುಗಳನ್ನು,

ಮಧ್ಯಯುಗ ನಾಗರೀಕತೆಯ ದೇಹವಿದಿಲ್ಲಿ.
ಮಗಳೊಡನೆ ಬಂದೊಬ್ಬ ಮುದುಕಿ ಬಿದ್ದಳು ಬವಳಿ
ಬರಲೇರಿ ; ಬರ್ಚಿಯಿಂದಾಚೆಯೆಂದತಿ ಚೀರಿ.
ತಾಯಂದಿರನು ಕೂಡಿ ಬಂದ ಮಕ್ಕಳು ಕಣ್ಣು
ಬಿಡುತಿದ್ದವೀ ಭಯಾನಕ ಸೃಷ್ಟಿಯನು ನೋಡಿ.
ನಮೋ ! ನಮೋ ! ಮಧ್ಯಯುಗವೇ ! ನಮೋ ! ನಮೋ !
ವರವೊಂದನಿತ್ತು ಮುಂದಕೆ ಸಾಗು. ನಮ್ಮಗಳ
ದಾರಿಯಲಿ—ದಾರುಣಾರುಣಾರುಣದ ದಾರಿಯಲಿ—
ಬಾರದಿರು. ನೀನಿಲ್ಲದಿಹುದು ರುಧಿರ ಸಮೃದ್ಧಿ.

೩

ಕೊತ್ತಳದ ತುದಿಬಂಡೆಯೇರಿದೆನು. ಮಾನವನ
ಹೊಲೆನಡತೆಬತ್ತಳಿಕೆಯಲಿ ಬಾಣ ಮುಗಿದಿಲ್ಲ.
ಮನುಕುಲದ ಪಾಪಮಂದಿರದ ಗರ್ಭವಿದೆನಲು
ಗತಿಸಿದ ಮಹಾಯುದ್ಧಕೆಂದಿಟ್ಟ ಸ್ಮಾರಕವು
ಕಣ್ಮನವನಂಜಿಸಿತು. ದಿಟ್ಟಿಸಿದೆನಡಿಯಿಕ್ಕಿ,—
ನಿಟ್ಟಿಸಿದೆ ಮರಣ ಕೊರೆದಿರುವಮರಶಾಸನವ.
ಗೋಡೆಗೋಡೆಗೆ ಶಿಲ್ಪಿ ನಿರ್ಮಿಸಿದ ಸೈನಿಕರು,—
ಹೇಳಹೆಸರಿಲ್ಲದರ ಪಡುಶಿಲಾಮೂರ್ತಿಗಳು—
ಕಾಸಿ ಕಬ್ಬಿಣ ಕಂಚಿನಲಿ ಹೊಯ್ದ ಪ್ರಾಣಗಳು—
ಮೃತದೇಹಗಳನೆ ತುಂಬಿಹ ಪ್ರಾಣವಾಯುಗಳು—
ಮೂಡಲಿವೆ ಭಿತ್ತಿಯಿಂದೀ ಚಿತ್ರಭಿತ್ತಿಯಲಿ.
ತಾಯ್ನಾಡ ಕರೆಯೆಂದು ಮೋಸಗೊಂಡಿಹ ಮುದುಕ,
ಕರ್ತವ್ಯವೆಂಬಾತ್ಮವಂಚನೆಗೆ ಗುರಿಯಾದ,
ನವಯುವಕ, ಬಾಲಲೀಲೆಯ ತೊರೆದವಶಾನುಷರ
ಹೊಂಚಿನಲಿ ತುತ್ತಾದ ಮುದ್ದು ಶಿಶು,—ಎಲ್ಲರೂ
ಸಾಲ್ಗೊಂಡು ನಡೆದರಾ ಪ್ರಳಯಾಗ್ನಿಯುದ್ಧದಲಿ.

ನೋಡಿದಶ್ವಾರೋಹಿಗಳ ಸಾಲು, ಕಾಲಾಳು-
ಗಳ ದಂಡು, ಕಡಲ ಕಾಳಗದವರ ಬಳಗವಿದು,
ಕಪ್ತಾನರಿಡಿಹಿಂಡು. ಚಾಣಕ್ಯತಂತ್ರದಲ್ಲಿ,
ಕೊಲೆಪಾತಕಿಯು ಕಲೆಯು ಸಾಗುವಳಿಸುವ ಖಳರ,
ಧೂರ್ತರಾಕಾಂಕ್ಷೆಗಳ ಪೂರೈಸುವದೆ ಮೋಕ್ಷ-
ವೆಂದು ನಂಬಿದ ಜನವು ಮರಣವನೆ ಗುರಿಯಿಟ್ಟು
ಕೊಲ್ಲುತಿದೆ, ಸಾಯುತಿದೆ, ಕೊಲ್ಲುತಿದೆ, ಸಾಯುತಿದೆ.
ಕಿಂಕರ್ತವ್ಯಂ ? ಯುದ್ಧಸ್ವ. ಕಿಂಕರ್ತವ್ಯಂ ? ಯುದ್ಧಸ್ವ.
ಯುದ್ಧಮೇಕಂ ಶರಣಂ ವ್ರಜ. ಮೋಕ್ಷಮಾಪ್ಸ್ಯಸಿ.
ಇದೇ ಅವರ ಬೈಬಲ್ಲು, ಗೀತೆ, ಬಗೆಯುಡಿಗಲ್ಲು.
ವಾ:ರ್ ಟು ಎಂಡ್ ವಾ:ರ್ ; ವಾ:ರ್ ಟು ಎಂಡ್ ವಾ:ರ್.
ಇಂತು ಸಂಖಿಧ್ವನಿಯು. ಇಂತವರ ರುಧಿರಸ್ವನ.
ಜನರ ಕಿವಿ ಗಡಚಿಕ್ಕಿ ಕಣ್ಗೆ ಕತ್ತಲೆ ಕವಿದು
ಮಂಕುಹಿಡಿಯಲು ಬುದ್ಧಿ, ಹಿರಿಕಿರಿಯರೆನ್ನದಲೆ
ಮದ್ದುಗೊಳವೆಯ ಕೊಂಡು ಎದ್ದರಲ್ಲವೆ ಅವರು ?
ಕುದುರೆ ತುಳಿದಿತ್ತಿವನ, ತೋಫು ನುಂಗಿತ್ತವನ ;
ಲಕ್ಷೋಪಲಕ್ಷ ಜನ ವ್ಯರ್ಥ ಸಾಯುವರಲ್ಲ,—
ಲಕ್ಷ್ಯಕ್ಕೆ ತಾರಿರೋ ! ಎಂದು ಕೂಗುವ ತೆರದಿ
ಮಂದಿರದ ಭಿತ್ತಿಗಳ ಕಾಂಡಪಟದಲ್ಲಿಂತು.
ಮೂಡಿಸಿದನೀ ಮಹಾಮರಣ ಯಾತ್ರೆಯು, ಶಿಲ್ಪಿ.
ಕಂಡೆನೊಬ್ಬಳು ಗರತಿ ತುಸು ಹಿಂದೆ ಬರುತಿಹುದ.
ಅಜ್ಞಾತಯೋದ್ಧರಾಮೂರ್ತಿಶಾಲೆಯಲಿನ್ನು
ಕಾದಲನ ಗುರುತಿಸಲು ಬಾರದೆಯೇ ಮರುಗಿದಳು.
ನೆನೆದಳೀ ದುರ್ಭಾಗಿಗಳ ಜೊತೆಗೆ ತನ್ನ ಪತಿ—
ಯಸುವ ಬಿಸುಟಿದ ಬಗೆಯು, ತುಂಬುತ್ತ ಕೋಡಿಯೊಡೆ-
ದವು ಕಣ್ಣು ಪರಿಚಯದ ಛಾಯೆ ಹೊಳೆಯಲದೊಂದು
ಕೃತಿಯಲ್ಲಿ ! ಹಾ ! ನಲ್ಲ ! ಹಾ ! ಮನೋಜ್ಞನೆ ! ಎಂದು

ಚೀರಿ ನೆಲಕುರುಳಿದಳು. ಹೊಸಯುಗವೆ ! ಹೊಸ ಜಗವೆ !
ನೀವು ಮಾಡಿದುದೇನು ? ಹೊಸ ಸಮಸ್ಯೆಯನೊಂದ-
ನಾರೋಪಿಸಿದಿರಿಂದು, ಹಿಂದೊಬ್ಬ ಕಲ್ಲೊಗೆದು
ಕೊಲುತ್ತಿದ್ದನೊಬ್ಬನನು : ಬಾಂಬಯುಲಿನಿಂದಿಂದು
ಬಾಂಬೆಸೆದು ಬೆಂಕಿಯಿಡಬಹುದು ಪಟ್ಟಣಗಳಿಗೆ.
ನಾಗರೀಕತೆಯಿಂತು ಹಿಂಸೆಗೆಡೆಯಿಟ್ಟಿರಲು
ಅಲೆಯೋಣ ಕಾಡುಜನರಾಗುತ್ತ ಕಾಡುಗಳೆ,
ತೊರೆಯೋಣ ನಾಡುಗಳ. ಹೃದಯ ಕಲುಷಿತವಿರಲು
ಬುದ್ಧಿಯಿದ್ದೇನು ಫಲ, ವಿದ್ಯೆಯಿದ್ದೇನು ಫಲ ?
ಹುಸಿನಗೆಯ ನಕ್ಕಂತು ಹಸನಗೆಯ್ಯುವದಿಳೆಯು ?

೪

ಎದೆಯ ತಿದಿಯಿಂದ ನಿಗಿನಿಗಿ ಕೆಂಡದುಸಿರಂತೆ
ನೆಗೆದಿತ್ತು ನಿಟ್ಟುಸಿರು. ದೂರ ನೋಟವು ಹೊರಳಿ
ಗಾವುದಗಳಾಚೆ ಚಿರಮಧುರ ನಿದ್ರೆಯಲಿರುವ
ಶಾಂತಪ್ರಶಾಂತ ಸಾಗರವನಾಲಂಗಿಸಿತು.
ಕೋಟೆಯಡಿಯಲಿ ರಾಜಮಾರ್ಗಗಳಲೆಡಬಿಡದೆ
ಟ್ರಾಮು ಮೋಟರು ಬಸ್ಸು ಚೆನ್ನರಾಟಿಗೆಯಂತೆ
ಮಟಾಗಿ ಸಾಗಿಹವು. ಹಲವು ಗೊಂಬೆಗಳಂತೆ
ಜನಸಂದಣಿಯ ಜಾತ್ರೆ ಸಂಸಾರ ನಡೆದಿಹುದು.
ದೇವನಿತ್ತಿಹ ಬುದ್ಧಿಯನು ಬಳಸದಾದೆವೆ ?
ಏನು ದೈವವೆ ಕಾಡುಮಿಗದಂತೆ ಕಾಡುವದೆ ?
ಧವಲಗಿರಿಯನಿತು ಬಿತ್ತರವಡಿಯೆ ಪಾಂಡಿತ್ಯ
ಹೃದಯವೆಳ್ಳಷ್ಟು ಮಾರ್ಪಡದೆ ಬದುಕಿಹೆವಾವು
ಹಗೆತನದ ವಿಷವುಣಿಸಿದಂಥ ಒಗೆತನದಲ್ಲಿ !
ಇಂದಿನೆಮ್ಮಯ ಬೇನೆಗಳನು ತಿಳಿದವರಾರು ?
ಬರಲಿರುವದಂತೆ ಸಾಯುಜ್ಯ ಸಮತೆಯದೊಂದು ;

ಧರಣಿಯಾಗುವದಂತೆ ಸ್ವರ್ಣಸ್ವಪ್ನದೊಲಂದು
ಪಡೆದಪ್ಪ ದುಡಿದಪ್ಪರೆಂಬ ಭೇದಗಳಳಿದು.
ಬರಲಿರುವದಂತೆ ಇದು,—ಅಂತೆ, ಅಂತೆಯು ಕಂತೆ !
ಇದನರಳಿಸಲು ಇನ್ನು ಮುಂದೆ ಹರಿಯುವವಂತೆ
ಶೋಣಿತದ ಹೊನಲಶ್ರುಜಲದ ವಾರಿಧಿಯೊಳಗೆ.
ಆನಂದಿಂದುದ್ಭವಿಸಿ ಬಂದ ಧಾರುಣಿಯು-
ಲೊಂದು ಮಹದಾನಂದದಾಳಿಕೆಯ ನಿಲ್ಲಿಸಲು
ಮನೆಮನೆಯ ದೀಪವನು ನಂದಿಸುವದೇ ದಾರಿ-
ಯೆಂಬುಸಿರು ದಿಟವಿರಲು,—ವಿಧಿಯು ರುಧಿರಪ್ರಿಯವು !
ವನಚರರ ಯುಗದೊಳೀ ಬೆಟ್ಟದೆಡೆ ಹಬ್ಬಿತ್ತು
ಕಾಡು ಮಿಗಿಗಳ ಭಯವು ; ರೋಮದಾಳಿಕೆಯಲ್ಲಿ
ಹಿಂದುಳಿದ—ಮುಂಬರಿದ ಜನತೆಗಳ ಗುದುಮುರಿಗೆ.
ಮಧ್ಯಯುಗದಲ್ಲಿದರ ಮುಡಿಗೆ ಕೋಂಟೆಯ ಕಟ್ಟಿ
ಬಾಳಿದರು ಒಲವು-ಚೆಲವುಗಳ ಹೋಳಿಯನಾಡಿ.
ಇಂದಿಗೋ ! ಕೊಲೆಯೆಂಬ ಭಿಲ್ಲಿಣಿಗೆ ತಾಯ್ನಾಡ
ಪ್ರೀತಿಯೆಂಬೊಂದು ಕುಂಕುಮದ ಬೊಟ್ಟಿಟ್ಟು ಕಾ-
ಡಿಗೆಯಿಟ್ಟು ಪಟ್ಟಗಟ್ಟಿಹರಿಲ್ಲಿ ಮತ್ತವಳ
ಸೇವೆಯಲಿ ತೀರಿರುವರಮರರಿಹರೆಂದುಸುರಿ.
ಹಾಡಿಕೊಂಡತ್ತರೇನರಣ್ಯರೋದನವಲ್ಲೆ ?
ಹೊಂಗದಿರ ಮುಳುಗಿದನು. ಚಿಕ್ಕೆಗಳು ಬೆಳಗಿದವು.
ತಂತಿದೀಪಗಳೂರ ತುಂಬಿ ತಿಂತಿಣಿಸಿದವು.
ದೂರ ಕಂಡ ಸಮುದ್ರ ಮುಗಿಲ ಮರೆಯಾಗಿತ್ತೆ-
ಡಿನ್ ಬರೋದಲಿ ರಾತ್ರಿ ಜ್ಯೋತಿಮಯವಾಗಿತ್ತು.
ಇತಿಹಾಸರಾಕ್ಷಸನ ವಿಕಟಹಾಸವ ನೆನೆದು
ತ್ವೇಷಗೊಂಡಿಹ ಮನಕೆ ಭವಿತವ್ಯತೆಯ ಬ್ರಹ್ಮ-
ರಾಕ್ಷಸನ ರೂಪದಾವಿರ್ಭಾವ ಬೇಡೆಂದು
ತೆರೆಮರೆಯನಿಳಿಬಿಟ್ಟು ತೋರಿಕೆಗೆ ನಡೆದಿದ್ದ
ಮಾನವರ ವರಿಸಿದ್ದ ಮಾಯೆಯೆಡೆಗೆ.

## ಸಿಗದಿದ್ದ 'ನ್ಯುಡಿಗೇಟ'ನ್ನು ಕುರಿತು

ಇಲ್ಲಿ ತಂದ ಸಂಕಲ್ಪ ಬರಿ ವಿಕಲ್ಪವಾಯಿತೆ ?
ಅಂದು ನುಡಿದ ಬೀರನುಡಿಯದಿಂದು ಜಲ್ಪವಾಯಿತೆ ?
ಜಲಧಿಯಾಚೆ ಕರೆದು ತಂದ ದೈವ ಕೈಯ್ಯ ಬಿಟ್ಟಿತೆ ?
ದುರ್ದೈವವು ಬಿಟ್ಟ ಬಾಣ ಮರೆ-ಮೋಸದಿ ನಟ್ಟಿತೆ ?
ಎದೆಯ ಮುಗುಳ ಮುಟ್ಟಿತೆ ?

ಹಾತೊರೆಯಲಿಲ್ಲ ನಾನು ಹಂಸತಲ್ಪದಂದಕೆ.
ಬಾಯ್ದೆರೆದು ನಿಲ್ಲಲಿಲ್ಲ ಬೆಳ್ಳಸದಾನಂದಕೆ.
ಕನ್ನಡಿತಿಯ ಚೆನ್ನಡಿಗೆನೆ ಹೂವನೊಂದ ಬೇಡಿದೆ :
ದೊರೆಯದಿರುವ ಪಾಡಿಗಾಗಿ ಇಂದು ನೊಂದು ಹಾಡಿದೆ
ದೇವ ! ನಿನ್ನ ಕಾಡಿದೆ.

ನಿನ್ನ ಬಸಿರಿನಲ್ಲಿ ಬೆಳೆದು ಬರಲಿ ತಾಯೆ ! ಕುವರರು,—
ಎಣ್ದೆಸೆಯಲಿ ನಿನ್ನ ಗೆಲುವ ಸಾರುವಂಥ ಧೀರರು :
ದೈವವಿರಲಿ ಇಲ್ಲದಿರಲಿ,—ರಾಶಿಯಿತ್ತು : ತೂರಿದೆ :
ಜೊಳ್ಳುಗಾಳು ಗಾಳಿಗುಂಟ ಹೋಯ್ತು : ಹೌಹಾರಿದೆ :
ಮುಗಿಲಿಗೆದೆಯ ತೋರಿದೆ.

ಕಾಣದಂಥ ದೈವತವದು ನಿಂತು ನನ್ನ ಹೃದಯದಿ
ತಾಳ ಹಾಕುತಿಹುದು. ಅದರ ಸುಳಿವು ಹಿಡಿದು ವಿನಯದಿ
ಸಾಗುತಿಹೆನು. ಕಣ್ಣನಿತ್ತು ಕಾಪಿಡುವದು ಕೂಡಿದೆ
ನಿನ್ನನೆನ್ನ ತಾಯೆ ! ಅದರ ಕಿರಿಯಾಸೆಯು ಮೂಡಿದೆ !
ಕತ್ತಲಲ್ಲು ನಿನ್ನ ಸೇವೆಗೆಂದು ನನ್ನ ಹೂಡಿದೆ.

# ಭೃಂಗಗೀತ

'ನಂದನವನ ಮಕರಂದವ ತರಲು ನಡೆದ ಜಾಣ !
ಬಂದೆಯಲ್ಲ ! ತಂದುದೇನು ?' 'ಬರಿಯ ಪಂಚಪ್ರಾಣ.
ಮಿಂಚಿತೆಂದು ಮುಂದೆ ನಡೆದೆ. ಕಾಮಾಕ್ಷಿಯೆ ! ನಿನ್ನ
ಬಿಟ್ಟ ದಿನವೆ ಕವಿಯಿತೆನ್ನ ಕತ್ತಲಂಥ ಬನ್ನ !
ನಂದಿತೇನೊ ಎನ್ನ ಬೆಳಕು ಇಂಗಿತೇನೊ ಘ್ರಾಣ ?
ಅಂತೆ ಬಂತು ನಿನ್ನನರಸಿ ನನ್ನ ಪಂಚಪ್ರಾಣ :'

'ಪಣವ ತೊಟ್ಟ ವೀರನಿಂತು ರಣವ ಬಿಟ್ಟು ಬರುವನೆ ?'
'ಪಣವೆ ಅವನ ತೊರೆಯೆ ರಣವ ತೊರೆದು ಬಾರದಿರುವನೆ ?
ಪಯಣವೆ ಗುರಿಯೆಂದು ನಡೆದೆ. ದಾರಿದೋರಿದಾತನು
ತಿರುಗೆಂದನು. ತಿರುಗಿ ಬಂದೆ ನೆನೆಯುತವನ ಮಾತನು.
ಇಲ್ಲ. ನಲ್ಲೆ ! ಯಾವ ದ್ರೋಹವಿಲ್ಲ. ನನ್ನ ತ್ರಾಣ
ಕುಂದಿತಷ್ಟೆ, ಹಿಂದುಳಿಯಲು ನೀನು ಪಂಚಪ್ರಾಣ !

'ನಲ್ಲ ನಲ್ಲ ಲೋಕಮಲ್ಲನವನ ತ್ರಾಣ ಹಿಂಗಿತೆ ?'
'ಕೇಳು, ನಲ್ಲೆ ! ಸಂದೇಹ ನಿನ್ನ ಮನದಿ ತಂಗಿತೆ ?
ನಂದನದಲರೆಂದು ತಿಳಿದ ಮಲರಿನ ವಿಷವಾತವು
ಮರಣಜಾಲದಂತೆ ಬೀಸಲಲ್ಲೆಡೆಗಾಘಾತವು
ಕುತ್ತದಿರಲಿ ನನ್ನಸುವನು ; ಬತ್ತದಿರಲಿ ಘ್ರಾಣ ;
ಉಳಿದುದಳಿದರೇನು ಎಂದೆ : ತಂದೆ ಪಂಚಪ್ರಾಣ !'

'ರಾಜಭೃಂಗ ನಿನ್ನನಂಗ ಸಂಗವೆನ್ನ ಮುಕ್ತಿಯು.'
'ನೀನೆ ಜೇನು, ನಿನ್ನ ಸಾಮರಸ್ಯವೆನ್ನ ಶಕ್ತಿಯು !
ನಾವುಕಟ್ಟಿದಂಥ ಹುಟ್ಟು ಸಾಹಸಿಗಳ ತೊಟ್ಟಿಲ
ನಾವು ಕೂಡಿಸಿಟ್ಟ ಜೇನಿಗೆಲ್ಲ ನಾಡೆ ಬಟ್ಟಲ.
ಅಮೃತವಾಗಿ ಉಳಿಯಲೆಮ್ಮ ಜೀವದೇಕತಾನ :
ದಿವ್ಯದೇವಯಾನದಲ್ಲಿ ನನ್ನ ನಿನ್ನ ಪ್ರಾಣ !'

—ಗೆ

೧

ನೀನೊಂದು ಪಾರಿವಾಳ ; ನಾನೊಂದು ಪಾರಿವಾಳ.
ಗೂಡುಗಟ್ಟಿದೆವಿಲ್ಲಿ ಬಂದು ಮುಗಿಲ ಮೇಲಿಂದಿಳಿದು.
ಒಲವಿನ ದನಿಯಿಂದೊರ್ವರೊರ್ವರನು ಕರೆದೆವು.
ಒಸೆದೆವು, ಕನಸುಗಳ ಕಟ್ಟಿದೆವು, ತುಟಿಗೆ ತುಟಿಯನಿಟ್ಟೆವು.
ತತ್ವಜ್ಞಾನವಿರಲಿಲ್ಲ ನಮ್ಮ ನಲುಮೆಯಲ್ಲಿ
ಪಾಂಡಿತ್ಯವಿರಲಿಲ್ಲ ನಮ್ಮ ನಲುಮೆಯಲ್ಲಿ,
ವೇದಾಂತವಿರಲಿಲ್ಲ ಪ್ರೇಮಸಂವಾದದಲ್ಲಿ.
ಅರ್ಥವಿಲ್ಲದ ಮಾತಿನಲ್ಲಿ ಸಾರ್ಥಕತೆಯ ಕಂಡೆವು.
ತೂದಿಮೊದಲಿಲ್ಲದೆ ತೊದಲಿದೆವು ಬಾಳ್ವೆಯ ಸವಿಗನಸು ಕಟ್ಟಿ,
ಓ ! ಎನ್ನ ಪಾರಿವಾಳ !
ಓ ! ಎನ್ನ ಪಾರಿವಾಳ !
ನನ್ನ ನಿನ್ನ ಗೂಡಿನಲ್ಲಿ
ಪಡಿನುಡಿಯಲಿ ನಸುಕಿನ ಹಾಡು
ನನ್ನ ನಿನ್ನಂತರಾಳದಲ್ಲಿ ಚಿಗಿಯಲಿ ಬಾಳಿನ ಬೇರು.
ಗೂಡದು ಮಣ್ಣುಗೂಡಿದಾಗ, ಮುಗಿಲೆ ನಮ್ಮ ನಾಡಾದಾಗ,
ಸಂಸಾರವೆಲ್ಲ ಕನಸಾದಾಗ,
ಕಾಣಿಸಲಿ ದಾರಿಹೋಕರಿಗೆ ನಾವಿಬ್ಬರೊಸೆದಿದ್ದ ಪಾಂಗು;
ಕೇಳಿಸಲಿ ಪಥಿಕರಿಗೆಲ್ಲ ನಾವು ನಲಿದುಲಿದ ರಾಗ !
ಓ ! ಎನ್ನ ಪಾರಿವಾಳ !

೨

ಓ ! ನನ್ನ ಅಂಗೈಯ್ಯ ಅರಗಿಣಿಯೆ !
ಪಂಚಪ್ರಾಣಗಳ ಪಂಚವರ್ಣಾಮೃತವೆ !
ಬಗೆಬಗೆಯ ಮಾತುಗಳನು ನೀನು ಕಲಿಯಬೇಕೆಂದೆ.
ಕಾವ್ಯಶಾಸ್ತ್ರಗಳನು ನೀನು ಪಠಿಸಬೇಕೆಂದೆ,
ನಾನೊಬ್ಬ ಪಂಡಿತನಾಗಿ ನಿನ್ನನು ಪಂಡಿತವಕ್ಕಿಯಾಗಿಸಲೆಳಸಿದೆ !

ಇದೆಂಥ ಹುಚ್ಚು ! ಎಂತಹ ಕುರುಡುತನ !
ಪ್ರೇಮದ ರಹಸ್ಯವನೆ ತಿಳಿಯದೆ ಹೋದೆನಲ್ಲ !
ಮನೆಯ ಪಂಜರದಲ್ಲಿ ಸೆರೆಸಿಕ್ಕು ಮಾತು ಕಲಿಯುವ ಹಕ್ಕಿಯಲ್ಲ ಪ್ರೀತಿ :
ಹಸಿರಿನಲ್ಲಿ ಹಸಿರಾಗಿ ಬೆರೆತು ಒಡನುಡಿಯುವ ಮಹಾಶಕ್ತಿಯದು !
ಅಡವಿಯ ಹಕ್ಕಿ ! ಏ ! ನನ್ನ ಅರಗಿಣಿಯೆ !
ನಿನ್ನ ನಾಡಿನಲೊಯ್ದು ಪ್ರೇಮಮಂತ್ರವನ್ನೂದು,— ಈ ಕಲಿತ ಕಿವಿಗಳಲ್ಲಿ !
ತಳಿರಂತೆ ಮಲಮಲವೆನ್ನಿಸು ಮಲಿನವಾದ ಜೀವವಿದನ್ನು.
ಮೋಹಿಸಿ ಕರೆದೊಯ್ಯು ನನ್ನ ಕಲಿತವರ ಸೆರೆಮನೆಯಿಂದ !

೩

ಓ ! ನನ್ನ ಕೋಕಿಲ !
ನಿನ್ನ ಕುಕಿಲು ಕೇಳಲಿ ತಾಯ್ನಾಡ ಮಾಮರದಿಂದ.
ಉರ್ವಿಳೆಯಂತಹ ನಿರ್ಮಲ ಧ್ವನಿಯೆ !
ಅಖಂಡವಾಗಿ ನೆಲಿಸು ಕರ್ಣರಂಧ್ರಗಳಲ್ಲಿ !
ಸೊಗುನವಿಲುಗಳ ಕಂಡೆನಿಲ್ಲಿ ಸಮುದ್ರದಾಚೆ :
ದನಿ ತೆಗೆದರೆ ಕಿವಿ ಮುಚ್ಚಬೇಕು !
ಒಯ್ಯಾರದ ಅರಸಂಚೆಗಳ ನೋಡಿದೆ,—
ಗೋಣು ಮುರಿಯುವದ ಕಂಡರೆ ಪ್ರಾಣವ ಹಿಂಡಬೇಕೆನ್ನಿಸುವದು.
ನಿನಗಿಲ್ಲದ ಚೆಲುವಿಕೆವೆತ್ತ ಬೆಳ್ಳಕ್ಕಿಗಳ ಸಾಲು ಕಡೆ :
ಬೆಳವಗಳ ನೋಡಿದೆ
ಗೊರವಂಕಗಳ ಗರಿಯೆಣಿಸಿದೆ,
ಬುಲ್ ಬುಲದ ಏಡಾಯುವ ಕೇಳಿದೆ :
ಕಣ್ಕಿವಿಗೆ ಬಣ್ಣ-ನುಣ್ಣವಹುದಿವೆಲ್ಲ—
ಒಳಗಣ್ಣಿಗೆ ಮಾತ್ರ ಬರಿ ಸುಣ್ಣ !
ನಾಟ್ಯವೇನು ಜೀವಜೀವದ ಬದುಕೆ ?
ರೂಪವೇನು ಪ್ರಾಣಪದಕವೆ ?

ಓ ! ನನ್ನ ಕೋಕಿಲ !
ಕೋಕಿಲ ಮೊದಲಗಿತ್ತಿಯಂತೆ ತಾಯ್ನಾಡ ಮಂಟಪದಿಂದ !

೪

ಗಮಗಮಿಸುವ ನನ್ನ ಸುಗಂಧರಾಜಿಯೆ !
ಅರಳುತರಳಿಸುವ ಓ ! ಸೂರ್ಯಪಾರಿಜಾತವೆ !
ತೆನೆತೆನೆಯಾಗು ಕಾವುಕಸ್ತೂರಿ !
ರೇಶಿಮೆಯ ರಶ್ಮಿಯಾಗು ಸುಂದರಹೂವೆ !
ನಿನ್ನ ಪರಿಮಳವೇ ನನ್ನ ಸೌಭಾಗ್ಯ.
ನಿನ್ನ ವಿನಯುವೆ ನನ್ನ ಸಂಪತ್ತು.

ಯಾವ ಕುಸುಮಗಳು ಸರಿಯಾದಾವು—ನನ್ನ ವನಸುಮಕೆ ?
ವಿಲಾಯತಿಯ ಚಂಡುಹೂವ ನೋಡಿದೆ,
ನೀಲಿ ಹೂವ ಕಂಡೆ,
ತಿಳಿನೀಲಿ ಹೂವ ಚೆಲುವ ಮನಸಿನಲಳೆದೆ.
ಕೌಸ್ಲಿಪ್, ಹೇರ್‌ಬೆಲ್
ಪ್ರಿಂರೋಜ್, ಡೆಫೊಡಿಲ್,
ಫಾ:ಕ್ಸಗ್ಲೋವ್, ಫಾ:ರ್‌ಗೆಟ್ ಮಿ ನಾಟ್
ರೋಜ್ ಮೇರಿ ಬಟರ್‌ಕಪ್,
ಮೇ ಬ್ಲಾ:ಸಮ್, ಲಿಲಿ,—
ಕಾಮನಬಿಲ್ಲ ಬಣ್ಣ,
ಹೂಬಿಸಲ ಬಣ್ಣ,
ಅರಿಶಿಣ ಕುಂಕುಮ,
ಮದರಂಗಿ ಕೆಂಪು,—
ಏನಿದ್ದರೇನು ?—
ಗಂಧವಿಲ್ಲದ ಹೂವೆಂತು ಅಂದವಾಗಬಹುದು ?
ವಿಲಾಯತಿಯ ಗುಲಾಬಿಗೆ ಸಹ ಸುಗಂಧದ ಸೋಂಕಿಲ್ಲ !



8

ಓ ! ನನ್ನ ವನಮಲ್ಲಿಗೆ !
ನಿನ್ನ ವನಮಾಲೆಯೇ ಮಾಲೆ !
ಓ ! ನನ್ನ ಸೂಜಿಮಲ್ಲಿಗೆ !
ನಿನ್ನ ಕಿರಣವೇ ಕಿರಣ !
ಓ ! ನನ್ನ ದುಂಡುಮಲ್ಲಿಗೆ !
ನಿನ್ನ ಕಿರೀಟವೆ ತಾರಾಕಿರೀಟ !
ನಿನ್ನ ಪರಿಮಳವಿಡಗಲಿ ನನ್ನ ಪಂಚಪ್ರಾಣಗಳಲ್ಲಿ !

## ಹುಟ್ಟಿದ ದಿನ

ಬಾಳ್ವ ಬಯಕೆಯಿಲ್ಲದೆ
ಬಾಳಲೆಂದು ಬಂದೆಯಾ ?
ಬಾಳುವದರ ಮರ್ಮವು
ಹೊಳೆಯದೆಂದು ನೊಂದೆಯಾ ?
ಬಾಳಿದೆಲ್ಲ ವಿಷಮವೆಂಬ
ವಿಷವನುಂಡು ಬಂದೆಯಾ ?
ಹುಟ್ಟಿದೊಡನೆ ಹುಟ್ಟಬಾರ-
ದೆಂಬ ನೋವ ತಂದೆಯಾ ?

ಹೊಳೆಯಲಿನ್ನು ನಿನ್ನ ಮನಕೆ,—
ಕೊಚ್ಚುವಂಥ ಹೊಳೆಯಿದು.
ದಣಿದು ಸಾಗಗೊಳಿಸಲಾಗ
ಬಾಗಿ ನಿಲ್ವ ಬೆಳೆಯಿದು :
ಕಣ್ಣೀರಿನ ಮಳೆ ತೋಯಿಸೆ
ಕಂಪು ಬೀರುವಿಳೆಯಿದು :
ನಮ್ಮ ಬಾಳ್ವೆಯೆಂಬದು !

## ಜೀವಹಂಸ

ಯಾವ ತಾಳಕ್ಕೆ ಕುಣಿಯುವದು ನನ್ನ ಜೀವ ?
ಯಾವ ಬೆಳಸನು ಕಂಡು ಸಮುದ್ರದಾಚೆ ಹಾರಿತು ಜೀವಹಂಸ ?
ಏನನ್ನೆಳಸಿತು ! ಏನನ್ನು ಪಡೆಯಿತು !
ಈ ವಿಚಿತ್ರವ ತಿಳಿದು ಬಲ್ಲವರುಂಟೆ ?

ಮಾನಸದ ತಿಳಿಗೊಳ ಬಿಟ್ಟು ತಾಮಸದ ನದಿಗೆ ಹೋದ ಹಂಸವೆ !
ನೀರು ಸಿಗಲಿಲ್ಲ ನಿನಗೆ ; ನೀರಡಿಸಿ ತಿರುಗಿ ಬಂದೆ !
ಏಳು ಸಮುದ್ರಗಳ ದಾಟಿದರೂ ದೊರೆಯದಾಯಿತೆ ನೀರಕಾಳು ?
ಹನಿಯೊಡೆಯಲಿಲ್ಲವೆ ಮುಗಿಲು ? ಹೆಚ್ಚಾಯಿತೆ ದಾಹ ?
ಏತಕ್ಕೆಂದು ಹೋದೆ ? ಏನನ್ನು ನೆನೆಸಿ ನೊಂದೆ !
ಎಲೆಲೆ ! ಜೀವಹಂಸ ! ದೈವದ ಮುಂದೆ ಹಾರಿದರುಂಟೆ ?

ನಿಬ್ಬಣದ ಮಬ್ಬಿನಲ್ಲಿ ನೆಗೆದ ಹಂಸ,—ಇಬ್ಬಣದಿರುಕಿನಲ್ಲಿ ಗಾಸಿಗೊಂಡಿತ್ತು.
ಜ್ಯೋತಿರ್ಮಯನ ಕಾಣಲೊಪ್ಪಿ ಕದಲದ ಕತ್ತಲೆಯನಪ್ಪಿತು.
ಚಿಕ್ಕಿಯ ಸಹ ಕಾಣದೆ ಕಕ್ಕಾವಿಕ್ಕಿಯಾಗಿ
ಮಿಕ್ಕಲು ಶೂನ್ಯತೆಯು, ತಿಕ್ಕಲು ಯಾತನೆಯು,
ದಿಕ್ಕುದಿಕ್ಕಿನಲ್ಲಿ ರೆಕ್ಕೆ ಬಡಿಯಿತಯ್ಯ ! ರೆಕ್ಕೆ ಬಡಿದು ದಣಿಯಿತು.
ಬೆಳಕು ಸೀಮೆಯು ಬಿಟ್ಟು ನಿಶೆಯ ರಾಜ್ಯವ ಹೊಕ್ಕವರುಂಟೆ ?
ಹೊಕ್ಕು ಮತ್ತೆ ಬೆಳಕಿಗಾಗಿ ಬಾಯ್‌ಬಿಟ್ಟವರುಂಟೆ ?
ಉಂಟು ! ಉಂಟು !

ಎದೆಗುಂದದಿರೆಲೆ, ಅರಸಂಚೆ ! ಜೀವದಾಸೆಯ ಬಿಡದಿರು !
ಹನಿಯೊಡೆಯದಿರೆ, ಮುಗಿಲು,—ಎದೆಯೊಡೆದು ಸಹ ನೀರು ಬರಬಹುದು.

ಸುತ್ತೆಲ್ಲ ಕತ್ತಲೆಯೂ ಮುತ್ತೀಲೇನು ?
ರೆಕ್ಕೆಗಳು ಚಲಿಸಿರಲು,—ಚಿಕ್ಕೆಗಳಂತೆ ಮಿನುಗುವವಲ್ಲ !
ಧೈಯಾನವಿದ್ದಲ್ಲಿ ಧಾವಿಸುವದು ದೈವಿಕತೆಯ ನಿತ್ಯನಿಯಮ.
ದಿವ್ಯಪ್ರಭೆಯು ದೊರೆಯಲಿಲ್ಲವೆಂದು ಮರುಗದಿರಲೆ, ಅರಸಂಚೆ!
ಆ ಪ್ರಭೆಯು ನೀನೆ !
ನಿನ್ನ ಬೆಳಕನ್ನು ತಿಳಿಯಲು,–ನಿಶೆಯ ನಾಡಿದಲ್ಲಿ ಹಾರಿದೆ ನೀನು !
ಈ ತಿಳಿವಿನಿಂದ ಬಾಳು,—ತಿಳಿವಿನೊಂದು ಹೊಳೆವತನಕ !

## ಮುಗಿಲ ಮಲ್ಲಿಗೆ

ಬರಿಗೈಲಿ ಬಂದಿಲ್ಲ, ಮಲ್ಲಿಗೆಯ ತಂದೇನ,
ಮುಗಿಲವರು ಮುಡಿವ ಮಲ್ಲೀಗೆ !
ಮುಗಿಲವರು ಮುಡಿವ ಮಲ್ಲೀಗೆ, ಏ ನಲ್ಲೆ !
ಮುಗಿದಿಲ್ಲ ಪಯಣವಿಲ್ಲೀಗೆ !

ಕತ್ತಲಲಿ ಕಾಲ್ತೊಡಕಿ, ಮೋಡದಲಿ ಮೈ ತೊಡಕಿ,
ತೊಳಲಾಡಿಸಿರಲು ಮಾರೋಗ.
ತೊಳಲಾಡಿಸಿರಲು ಮಾನರೋಗ, ಏ ನಲ್ಲೇ !
ಎದುರು ಬಂತೊಂದು ಹೊಸ ಯೋಗ !

ವಸಿಷ್ಠಋಷಿ ಬಂದಾ ನಿಂದವಳರುಂಧತಿ,
ನಿಲ್ಲಿಸುತ ನನ್ನ ಕೈನೀಡಿ,
ನಿಲ್ಲಿಸುತ ನನ್ನ ಕೈನೀಡಿ, ಏ ನಲ್ಲೆ !
ಕರುಣಿಸಿದರೆನ್ನ ಗತಿ ನೋಡಿ.

'ನಿನ್ನ ದೈವದ ಶಿಲ್ಪಿ,—ಅಹುದು ನೀನೇ ಕಂದ'
ಎಂದಿತ್ತರೊಂದು ಮಲ್ಲಿಗೆಯ.
ಇತ್ತರಿನ್ನೊಂದು ಮಲ್ಲಿಗೆಯ ಏ ನಲ್ಲೆ !
"ತಿಳಿದಿರುವೆ ಬಾಳಿನಾನಂದ !"

"ನಿನ್ನ ನಲುಮೆಯು ನೀನೇ ! ನಿನ್ನ ನೇಹವು ನೀನೇ !
ಹಿಂದು ಮುಂದೆಲ್ಲ ನಿನ ಸೊತ್ತು.
ಹಿಂದು ಮುಂದೆಲ್ಲ ನಿನ ಸೊತ್ತು !" ಏ ನಲ್ಲೆ !
ಎಂದರವರಾರಿಗಿದು ಗೊತ್ತು !

"ಸ್ಫೂರ್ತಿಗೆನೆ ಶರಣಾಗೋ ! ಕಾರುಣ್ಯಮೂರ್ತಿಗಳ,
ಧ್ಯಾನದಲಿ ಕಾಣು ಮುಕ್ತರನು !
ಧ್ಯಾನದಲಿ ಕಾಣು ಮುಕ್ತರನು" ಏ ನಲ್ಲೆ !
ಕಾಣೆಂದರೆಲ್ಲ ಭಕ್ತರನು !

ಇಳೆಗೊಂದು ಶಾಸನವೊ ಹೊಳೆಗೊಂದು ಶಾಸನವೊ
ಆತುಮಕದೊಂದು ಶಾಸನವು !
ಆತುಮಕದೊಂದು ಶಾಸನವು" ಏ ನಲ್ಲೆ !
'ತಿಳಿಯೆಂದರಿದೆ ಉಪಾಸನವು,'

"ಅವರಿತ್ತ ಮಲ್ಲಿಗೆಗೇ ಮುಗಿದಿತ್ತು ಯಾತನೆಯು,
ಇಡಿದಿತ್ತು ಕಂಪು ಹೊರವೊಳಗ !
ಇಡಿದಿತ್ತು ಕಂಪು ಹೊರವೊಳಗ" ಏ ನಲ್ಲೆ !
ಹಿಗ್ಗಲಿದಕೆನ್ನ ಎದೆಬಳಗ !

ಮಲ್ಲಿಗೆಯ ಬೆಳಕೀಗೆ ಬೆಳ್ಳಬೆಳಗಾಗಿತ್ತ !
ಚಿಗಿಯೀತು ನನ್ನ ಎದೆಕೊನರು :
ಚಿಗಿಯೀತು ನನ್ನ ಎದೆಕೊನರು : ಏ ನಲ್ಲೆ !
ಆಗೋಣ ಮುಕಿಕೇತನರು !

## ಅರ್ಪಣ

ಬದುಕಿಸಿದೆ ನೀನೆನ್ನ. ಯಾವ ಬದುಕೇನೆನಗೆ !
ನಿನ್ನಾಣತಿಯೆ ನನ್ನ ಜೀವಿತದ ಗುರಿಯು.
ನೀನಿತ್ತ ಕೀರ್ತಿಯನು. ಹೇಗೆ ಬಳಸುವದೆಂಬ
ಅರಿವವುದು. ಅದುವೆ ಜೀವಿತದ ಝರಿಯು

ಮರಣಶಯ್ಯೆಯಲಿರಲು ಪ್ರಾಣದಾನವನಿತ್ತೆ.
ಉಳಿಸಿರುವ ಹರಣವನು ಬಳಸಿ ನೋಡು :
ನಿನ್ನಾರತಿಗೆ ದೀಪ, ನಿನ್ನ ಕೊರಳಿಗೆ ಹೂವು.
ನಿನ್ನ ಕಿವಿಗಂಪುಸೊಂಪಾದ ಹಾಡು
ನನ್ನ ನಾಡಿನ ಸೇವೆಗೆನ್ನನುಳಿಸೆಂದೊರೆಯೆ
"ಹೋಗು. ಕನ್ನಡನಾಡ ಸೇವಿಸೆಂದೆ."
"ನನ್ನನೇ ನಂಬಿರುವ ನನ್ನಿಗರ ಕಾಂಬೆನೆನೆ"
ಹೋಗು. ಬಾಳವರೊಡನೆ. ಧಾವಿಸೆಂ"ದೆ !

ಚೆಲುವ ಕನ್ನಡನಾಡಿಗೊಂದು ಮಲ್ಲಿಗೆ ಹೂವ
ತರಲೆಂದು ತೆರಳಿದ್ದ ತರಳ ನಾನಂ.
ನಿನ್ನ ವರದಾನಕ್ಕೆ ಸರಿಯಾವುದೈ ದೊರೆಯೆ ?
ಜೀವಸುಮವನೆ ನಿನಗೆ ಸಲ್ಲಿಸುವೆನು.

ತಿಳಿಯೆ ನಿನ್ನಯ ರೂಹ, ಅಳೆಯೆ ನಿನ್ನಯ ಠಾವ ;
ಅರಿಯೆ ನಿನ್ನಯ ಮಾಯೆಯನು ದೇವದೇವ.
ಕೋಟಿ ನಕ್ಷತ್ರಗಳ ಕೋಟಿ ಯೋಜನದಾಚೆ
ನೆಲೆಸಿರುವೆ. ನಿಲುಕದಲ್ಲಿಗೆ ನನ್ನ ಭಾವ.

ನೀ ಕಾಣದಿರಲೇನು ? ಮನಗಂಡಿಹೆನು ನಿನ್ನ.
ದನಿಯಾಲಿಸದೆ ನಿನ್ನ ಮನವ ತಿಳಿದೆ.
ನಿಗಮಗೋಚರ ! ನಿನ್ನ ದಾಸಾನುದಾಸನಿಹೆ.
ನಿನ್ನ ಪದಪದ್ಮದಲಿ ಹುಟ್ಟಿ ಬೆಳೆದೆ.

